# ಕೊಡಗು ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 19 ಜನವರಿ 1 ರಿಂದ 15–1998 ಪುಟಗಳು : 24 ರೂ. 5




ರೇಖಾ ಚಿತ್ರ : ಉಳುವಾರನ ರಾಜೇಶ್

ಚಂದದಾರರಿಗೂ, ಓದುಗರಿಗೂ, ಹಿತೈಷಿಗಳಿಗೆಲ್ಲರಿಗೂ ಸಂಗಾತಿಯ

ಹೊಸ ವರ್ಷದ ಶುಭಾಶಯಗಳು – 1998

# ಪ್ರಿಯ ಓದುಗರು ಅವಶ್ಯವಾಗಿ ಗಮನಿಸಬೇಕಾದ ವಿಷಯ

ಅನಿವಾರ್ಯವಾಗಿ ಮತ್ತು ನಮ್ಮ ನಿಮ್ಮೆಲ್ಲರ ಅನುಕೂಲಕ್ಕಾಗಿಯೂ ನಮ್ಮ "ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯ ಕಾರ್ಯಾಲಯವನ್ನು ದಿನಾಂಕ 1-1-1998 ರಿಂದ ಈ ಕೆಳಗಿನ ವಿಳಾಸಕ್ಕೆ ಸ್ಥಳಾಂತರಿಸಲಾಗಿದೆ. ಓದುಗರು, ಹಿತೈಷಿಗಳು, ಚಂದಾದಾರರು ಸಹಕರಿಸಬೇಕಾಗಿ ವಿನಂತಿ.



ವಿಳಾಸ : ಕೊಡಗು ಸಂಗಾತಿ
ನಂ. 35, "ಸವಿತ ನಿಲಯ"
1ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 4ನೇ ಬ್ಲಾಕ್
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ
ಜಯಲಕ್ಷ್ಮಿಪುರಂ, ಮೈಸೂರು–12
ದೂರವಾಣಿ ಸಂಖ್ಯೆ : 0821/516771

ಸಂಪಾದಕಿ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ರಮೇಶ್**

ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**

ಕಾರ್ಯ ನಿರ್ವಾಹಕಿ :
**ಕು॥ ಗೀತಾ ನೋಂಟಡ್ಕ**

ಪತ್ರಿಕಾ ಪ್ರತಿನಿಧಿ :
**ಕು॥ ಧನು ಚೆರಿಯಮನೆ**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮಣ್ಣಾಪುರ ಧರಣಿ ಗಣಪತಿ**

ಮುದ್ರಕರು :
**ಮಣ್ಣಾಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 1ನೇ ಮುಖ್ಯ ರಸ್ತೆ
4ನೇ ಬ್ಲಾಕ್, ಡಿವಿಜನಲ್ ಟೆಲಿಕಾಂ
ಕಛೇರಿ ಹತ್ತಿರ, ಜಯಲಕ್ಷ್ಮಿಪುರಂ
**ಮೈಸೂರು-12.**


## ಒಳನೋಟ

ಪುಟಗಳು



### ಅರೆ ಭಾಷಿಕ ವಿಭಾಗ




**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಗೌಡರು ಕೊಡಗಿಗೆ ವಲಸೆ ಬಂದವರಲ್ಲ

**ಕೊ**ಡಗಿನಲ್ಲಿರುವ ಗೌಡ ಜನಾಂಗದವರಿಗೆ ಕನ್ನಡಜಿಲ್ಲೆಯಿಂದ ಬಂದವರೆಂಬ ಅಭಿಪ್ರಾಯ ಹುಟ್ಟಿಕೊಂಡಿರುವುದು ಆಶ್ಚರ್ಯ ! "ಟಿಪ್ಪುಸುಲ್ತಾನನು 85 ಸಾವಿರ ಕೊಡಗರನ್ನು ಕೊಂಡೊಯ್ದ. ಅವರ ಭೂಮಿ ಇವರಿಗೆ ಸಿಕ್ಕಿತು" ಎನ್ನುವ ಮಾತು ಕೇಳಿಬರುತ್ತದೆ. ಇವರನ್ನು ಕರೆಸಿಕೊಂಡ ಎನ್ನಬಹುದಾದ ಕಾಲದಲ್ಲಿ ರಾಜನೇ ಇದ್ದಿರಲಿಲ್ಲ. ನಂತರದ ದೊಡ್ಡವೀರರಾಜ, ಲಿಂಗರಾಜ ಗೌಡರನ್ನು ತರಿಸಿಕೊಂಡುದಾಗಿ ಎಲ್ಲೂ ಹೇಳಿಕೊಂಡಿಲ್ಲ. ಆದರೆ ಟಿಪ್ಪುಸುಲ್ತಾನನು ಬಳ್ಳಾರಿ ಜಿಲ್ಲೆಯ ಅದವಾನಿಯಿಂದ ರೈತರನ್ನು ಕರೆಸಿದನೆಂದು ಚರಿತ್ರೆಯಲ್ಲಿ ಇದೆ.

ಈಗಿನ ಕೊಡಗಿನ ಗಡಿ ಮತ್ತು ವಿಸ್ತೀರ್ಣ 1834ರಲ್ಲಿ ಬ್ರಿಟಿಷರು ಅವರ ಆಡಳಿತೆಯ ಅನುಕೂಲಕ್ಕಾಗಿ ನಿರ್ಧರಿಸಿದ್ದರು. ಆಗ ಸಾವಿರಾರು ವರ್ಷಗಳಿಂದ ಅಲ್ಲಿಯೇ ವಾಸಿಸುತ್ತಿದ್ದ ಗೌಡರನ್ನು ಕೊಡಗಿಗೆ ಬಂದವರು ಎನ್ನುವುದು ಒಪ್ಪುವಮಾತಲ್ಲ. ಕೊಡಗು ಒಂದು ಸಮಾನ ಸಂಸ್ಕೃತಿಯ ಜನ ಸಮುದಾಯದ ಸಾಂಸ್ಕೃತಿಕ ಘಟಕ ಅಲ್ಲ. ತುಳು ಸಂಸ್ಕೃತಿಯ ಸಂಪಾಜೆ, ಚೆಂಬು, ಪೆರಾಜೆ, ಕರಿಕೆ, ಕಡಮಕಲ್ಲು ಮೊದಲಾದ ಗ್ರಾಮಗಳು ಹಾಗೆಯೇ ಮಲೆನಾಡು ಬಯಲುಸೀಮೆ ಮಿಶ್ರ ಸಂಸ್ಕೃತಿಯ ಸೋಮವಾರಪೇಟೆ ತಾಲ್ಲೂಕು ಕೊಡಗಿನಲ್ಲಿದೆ. ಈಗಿನ ಕೊಡಗಿನಲ್ಲಿ ಸುಮಾರು ಮೂರರಲ್ಲಿ ಎರಡು ಪಾಲು ಜನರಿಗೆ ಕೊಡಗು ಭಾಷೆಗೊತ್ತಿಲ್ಲ ಎನ್ನುವುದೇ ಅನೇಕರಿಗೆ ತಿಳಿದಿಲ್ಲ.

ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶದ ವೈಶಿಷ್ಟ ಅಂಶಗಳನ್ನು ಗುರುತಿಸುವುದಾದರೆ ಕರ್ನಾಕದ ಉದ್ದಕ್ಕೂ ಘಟ್ಟದ ಮೇಲೆ ಇರುವುದು ಮಲೆನಾಡು ಸಂಸ್ಕೃತಿ. ಇಲ್ಲಿಯ ಜನರ ಸ್ವಭಾವ, ಉಡುಗೆ ತೊಡುಗೆ, ಆಚಾರ ವಿಚಾರಗಳಲ್ಲಿ ಸಮಾನತೆ ಇದೆ. ದೂರದರ್ಶನದಲ್ಲಿ ಕುವೆಂಪು ಅವರ "ಮಲೆಯಲ್ಲಿ ಮದುಮಗಳು" ಧಾರವಾಹಿ ನೋಡಿದವರಿಗೆ ಹೌದೆನಿಸಬಹುದು. ಘಟ್ಟ ಇಳಿಯುತ್ತಾ ಪಶ್ಚಿಮದ ಕರಾವಳಿ– ಪೂರ್ವದ ಬಯಲುಸೀಮೆ ಸಂಸ್ಕೃತಿಯೊಂದಿಗೆ ಬೆರೆತುಕೊಳ್ಳುತ್ತದೆ. ಕಡಲಿನ ನೀಲಿ – ಬಯಲಿನ ಹಳದಿ ಘಟ್ಟದಲ್ಲಿ ಬೆರೆತು ಹಸುರಾಗಿ ಕಂಗೊಳಿಸುತ್ತದೆ.

ಊರುಗಳು ಒಂದು ಪ್ರಾದೇಶಿಕ ಘಟಕವಾಗಲು ಗುಡ್ಡ ಬೆಟ್ಟಗಳು, ನದಿಗಳು ಕಣಿವೆಗಳು ನೈಸರ್ಗಿಕಕಾರಣಗಳಾಗುತ್ತವೆ. ಆದಕಾರಣ ನಮ್ಮ ಪರಿಸರದ ಇತಿಹಾಸದ ಕಡೆ ಗಮನ ಹರಿಸುವುದು ಅವಶ್ಯವೆನ್ನಿಸುತ್ತದೆ.

**ಐಗೂರು ಇತಿಹಾಸ :** ಲಕ್ಷ್ಮೀನರಸಿಂಹ ಶಾಸ್ತ್ರಿ 1936

ಶನಿವಾರಸಂತೆ ಸಕಲೇಶಪುರಗಳ ಮಧ್ಯದಲ್ಲಿರುವ ಐಗೂರು ಹಾಸನ ಜಿಲ್ಲೆಗೆ ಸೇರಿದೆ. ಇಲ್ಲಿಯ ಅರಸ ವೆಂಕಟಾದ್ರಿನಾಯಕ ಟಿಪ್ಪುಸುಲ್ತಾನನ ಬೆಂಬಲಿಗನೆಂಬ ಕಾರಣಕ್ಕೆ ದಿವಾನ್ ಪೂರ್ಣಯ್ಯನ ದಂಡು ಮೋಸದಿಂದ ಹಿಡಿದು 10–2–1802ರಲ್ಲಿ ಆತನನ್ನು ಗಲ್ಲಿಗೇರಿಸುತ್ತಾನೆ. ಎಂಬುದಾಗಿ ಇದರಲ್ಲಿರುವ ಲಾವಣಿಯಲ್ಲಿ ಚಿತ್ರಿತವಾಗಿದೆ.

ಸಾವಿರಾರು ವರ್ಷಗಳಿಂದ ಒಂದು ಸಾಂಸ್ಕೃತಿಕ ಘಟಕವಾಗಿದ್ದ ಐಗೂರು ಸಾಮ್ರಾಜ್ಯವನ್ನು ಬ್ರಿಟೀಷರು ಒಡೆದು ಮೈಸೂರು, ಹಾಸನ, ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಸೇರಿಸುತ್ತಾರೆ. ಹೀಗೆ 1804ರಲ್ಲಿ ಐಗೂರಿಗೆ ಸೇರಿದ್ದ ಅಮರ ಸುಳ್ಯ ಏಳು ಸಾವಿರ ಸೀಮೆ ದೊಡ್ಡವೀರರಾಜನ ಅರಮನೆ ಸೀಮೆಗೆ ಜೋಡಿಸಲ್ಪಡುತ್ತದೆ. ತಿ.ತಾ. ಶರ್ಮರ "ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗಾಮ"ವೆಂಬ ಚರಿತ್ರೆಯಲ್ಲಿ ವೆಂಕಟಾದ್ರಿ ನಾಯಕನ ಬಗ್ಗೆ ಒಂದು ಲೇಖನ ಇದೆ.

**ಪಟ್ಟೋಲೆ ಪಳಮೆ :**

ನಡಿಕೇರಿಯಂಡ ಚಿಣ್ಣಪ್ಪ–1924

ಎಂಟು ನಾಯಕರು ಕೊಡಗುದೇಶದ ಎಂಟು ನಾಡುಗಳನ್ನು ಆಳುತ್ತಿದ್ದರೆಂದು, ಆ ನಾಯಕರನ್ನು ಅರೆಬಾಷೆಕಾರರೆಂದು ಕರೆಯುತ್ತಿದ್ದರೆಂದು ಇದರಲ್ಲಿ ಬರೆದಿದ್ದಾರೆ. ಈ ಎಂಟುನಾಡುಗಳು ಯಾವುವು ಎಂದು ಹೇಳಿಲ್ಲ. ಐಗೂರು ಸಾಮ್ರಾಜ್ಯದ ಹೊರಗಿನ ಕಾಡು ಪ್ರದೇಶದಲ್ಲಿ ಮೊದಲು ಕಾಣಿಸಿಕೊಂಡದ್ದು ಹೊರಮಲೆನಾಡು ನಂತರ ಹಾಲೇರಿನಾಡು, ಆ ಬಳಿಕ ಮೂರುನಾಡು ನಾಕುನಾಡು, ಕಡೆಯತ್ತನಾಡು, ತಾವುನಾಡು, ಬೇಂಗುನಾಡು ಇವುಗಳ ಮಧ್ಯದಲ್ಲಿ ಮದೆನಾಡುಗಳಲ್ಲಿ ಜನಬಂದು ಬೇಸಾಯದಲ್ಲಿ ತೊಡಗಿದರೆಂದೂ ಮದೆನಾಡಿನಲ್ಲಿ ನೆಲೆಸಿದ ವ್ಯಾಪಾರಿಗಳ ಕೇರಿಯು ಮದಿಕೇರಿ ಎಂದು ಕರೆಯಲ್ಪಟ್ಟು ಈಗಿನ ಮಡಿಕೇರಿಯಾಯಿತೆಂದು ಹಿರಿಯ ಚಿಂತಕರೊಬ್ಬರು ಹೇಳುತ್ತಾರೆ.

1792ರಲ್ಲಿ ದಟ್ಟ ಅರಣ್ಯದಲ್ಲಿ ಬ್ರಿಟಿಷರು ವೀರರಾಜೇಂದ್ರಪೇಟೆ ನಿರ್ಮಿಸುತ್ತಾರೆ. ತಲಚೇರಿ, ಶ್ರೀರಂಗಪಟ್ಟಣಗಳ ನಡುವೆ ಅವರಿಗೆ ಒಂದು ಪೇಟೆಯು ಅವಶ್ಯ ಅನ್ನಿಸಿರಬೇಕು. ಅದರ ಸುತ್ತಲು ನಾಡುಗಳು ಬೆಳೆದವು. ಎಡೆನಾಲ್ಕುನಾಡು, ಬೆಪ್ಪುನಾಡು, ಅಮ್ಮತ್ತಿನಾಡು, ಕಿಗ್ಗಟ್ ನಾಡುಗಳಲ್ಲಿ ಜನಸಂಖ್ಯೆ ಏರತೊಡಗಿತು. ಪಟ್ಟೋಲೆ ಪಳಮೆಯಲ್ಲಿ ಕಾಣಿಸುವ 17 ದೇವತೆಗಳಲ್ಲಿ 13ದೇವರು ಕಾವೇರಿ ನದಿಯ ದಕ್ಷಿಣದಲ್ಲಿರುವ ನಾಡುಗಳಲ್ಲಿ ನೆಲೆಸಿವೆ. ಇವುಗಳಲ್ಲಿ ಕಾಞರಾಟಪ್ಪ, ಬೇಂದ್ರು ಕೋಲಪ್ಪ, ತಿರುನೆಲ್ಲಿ ಪೆಮ್ಮಯ್ಯ, ಮತ್ತು ಬೈತೂರಪ್ಪ ಈಗಿನ ಕೇರಳದಲ್ಲಿವೆ. ಉಳಿದ ದೇವತೆಗಳು ಕಣ್ಣೂರಿನಲ್ಲಿ ತೀಯ ಮಕ್ಕಳ

ಕಳ್ಳುವಾಸನೆ, ಮುಕ್ಕ ಮಕ್ಕಳ ಮಾನು ವಾಸನೆ ಸಹಿಸಲಾರದೆ ದೇವ ನೆಲೆ ಹುಡು ಕುತ್ತಾ ಕೊಡಗಿಗೆ ಬರುತ್ತವೆ. ಕಾವೇರಿ ಮಾತೆಯ ಅಪ್ಪಣೆ ಪಡೆದು ಅವರು ನಿಂತ ಊರಿನ ಹೆಸರು ದೇವತೆಗಳಿಗೆ ಜೋಡಿಸಲ್ಪಡುತ್ತದೆ. [ಉದಾ : ಹೊರ ಮಲೆನಾಡು ಭಗವತಿ, ಪಾಲೂರು-ಪಾಲೂರಪ್ಪ, ಪನ್ನಂಗಾಲ–ಪನ್ನಂಗಾಲತಮ್ಮೆ, ಕಾಕೋಟ್ ಅಚ್ಚಯ್ಯ] ಹೀಗೆ ದೇವತೆಗಳು ಬರುವಾಗಲೇ ಊರುಗಳ ಬೆಳವಣಿಗೆ ಆಗಿತ್ತು ಎನ್ನುವುದಕ್ಕೆ ಆಧಾರವಾಗುತ್ತದೆ.

ಅನಾದಿ ಕಾಲದಲ್ಲಿಯೇ ಇದ್ದ ಭಾಗ ಮಂಡಲದ ಭಂಗಡೇಶ್ವರ, ತಲಕಾವೇರಿ ಮೊದಲಾದ ದೇವಸ್ಥಾನಗಳ ಮುಕ್ತೇಸರಿಕೆ ವಂಶಪಾರಂಪರ್ಯದಿಂದ ಗೌಡ ಜನಾಂಗಕ್ಕೆ ಸೇರಿದೆ.

**ಲಿಂಗರಾಜನ ಹುಕುಂನಾಮೆ 1812 :**

ಅರಮನೆ ಸೀಮೆಗೆ ಸೇರಿಸಲ್ಪಟ್ಟ ಐಗೂರಿನ ಪ್ರದೇಶದ ಮೇಲೆ ಎಂಟು ವರ್ಷಗಳ ನಂತರವೂ ಅರಸನಿಗೆ ಹಿಡಿತ ಇರಲ್ಲಿಲ್ಲ. 3ನೇ ಅಪ್ಪಣೆಯಲ್ಲಿ "ಸಾಗು ರೈತರಿಂದ 100 ಬಟ್ಟಿ ಬತ್ತ ಉತ್ಪತಿ ಬರುವಲ್ಲಿ ಎರಡೂವರೆ ವರಹದಂತೆ ಎಷ್ಟು ಬರಬೇಕೋ ಅದನ್ನು ......" ಎಂದು ಹೇಳಿದರೆ "ಜಮ್ಮ ರೈತ ಭೂಮಿ ಲಿಂಗರಾಜೇಂದ್ರ ಗಜದಲ್ಲಿ ಅಳತೆ ಮಾಡಿ ಶಿಸ್ತು [ಕಂದಾಯ] ನಿಗದಿಮಾಡಿ ಹುಜೂರ್ ಧಫ್ತರಖಾನೆಯಲ್ಲಿ ಮಡಗಿದೆ......." ಎಂಬುದಾಗಿ ಬರೆದಿದೆ. ಈ ಅಪ್ಪಣೆಯ ಕೊನೆಯಲ್ಲಿ "ನಾವು ಮಾಡಿದ ಉಪಕಾರ ಮರೆತು ನಮ್ಮ ನಿಂಧನೆ ಮಾಡಿ ಅಪಕಾರ ಯೋಚಿಸುವ ರೈತರಿಗೆ ನಾವು ಶಿಕ್ಷೆ ಮಾಡೆವು. ಇದರ ಮೇಲೆ ಜನರ ನಡತೆ ಇದ್ದಂತೆ ಶಿವಮಹಾ ರುದ್ರಶಂಬುವೇ ವಿಚಾರಿಸಿಕೊಳ್ಳಲಿ" ಎಂದು ಬರೆಸಿದ್ದು ಆತನ ಅಸಹಾಯಕತೆನ್ನು ತೋರಿಸುತ್ತದೆ. ಜಮ್ಮ ರೈತರು ಮಾತ್ರ ಆತನನ್ನು ಅರಸನೆಂದು ಒಪ್ಪಿಕೊಂಡ ಹಾಗಿದೆ.

25ನೇ ಅಪ್ಪಣೆಯಲ್ಲಿ ಕುಲ ಕಸಬು ಮಾಡುವ ಜನಾಂಗಗಳಿಗೆ ವೃತ್ತಿತೆರಿವಿವರಿಗೆ ಸುತ್ತಾ 19 ಜಾತಿಗಳನ್ನು ಗುರುತಿಸಲಾಗಿದೆ. ಬೇಸಾಯ ಮಾಡುವ ನಾಲ್ಕು ಜಾತಿ ಸೇರಿ 23. ಆದರೆ ಇದರಲ್ಲಿ ಗೌಡ, ಲಿಂಗಾಯತ, ಬಾಹ್ಮಣರು ಸೇರದ ಕಾರಣ ಆತನ ಅಪ್ಪಣೆಯಿಂದ ಹೊರತಾಗಿದ್ದಾರೆ. 35ನೇ ಅಪ್ಪಣೆಯಲ್ಲಿ ಕೊಡಗಿಗೆ ಬಂದವರ ಬಗ್ಗೆ ಪ್ರಸ್ತಾಪಿಸುತ್ತಾ "ಮರ್ದಾಳ, ಏನೆಕಲ್ಲು, ಬಳ್ಪದ ಬಂಟರು, ಬಿಲ್ಲವರು" ಎಂದು ಬರೆದಿದೆ ಹೊರತು ಗೌಡರ ಬಗ್ಗೆ ಹೇಳಿಲ್ಲ. ಅರಗುಟ್ಟೆ ರುದ್ರಯ್ಯ, ಕುದಿಯ್ಯಡಕ ಕೃಷ್ಣಯ್ಯ ಇವರನ್ನು ಹೆಸರಿಸಿ ಮುಳ್ಳೂರು ಪೇಟೆ ಗೌಡನ ಕುಳ ಒಂದು ಎಂಬುದಾಗಿ ಬರೆದು ಹೆಸರು ಹೇಳದ ಚಮತ್ಕಾರ ನಡೆದಿದೆ.

37ನೇ ಅಪ್ಪಣೆಯಲ್ಲಿ ಕೊಡಗಿಗೆ ಬರಲು ಹೋಗಲು ರಹದಾರಿ/ಕಟ್ಟೆಚೀಟಿನ ಬಗ್ಗೆ ಹೇಳಲಾಗಿದೆ. ಕನ್ನಡ ಜಿಲ್ಲೆಯ ಉಕ್ಕಡ [ಗೇಟು] ತೊಡಿಕಾನದಲ್ಲಿದೆ ಎನ್ನುವುದರಿಂದ ಆತನ ಹಿಡಿತ ಸುಳ್ಯದ ಮೇಲೆ ಇರಲಿಲ್ಲವೆನ್ನುವುದಕ್ಕೆ ಆಧಾರವಾಗಿದೆ.

**ಟಿಪ್ಪುಸುಲ್ತಾನನ ಇತಿಹಾಸಕಾರರು ಕಂಡಂತೆ ಕೊಡಗು**

"ಈ ಆಶ್ಚರ್ಯಕರವಾದ ಕಾಡುಸೀಮೆಯನ್ನು ಕುರಿತು ನಾನು ಏನನ್ನು ಹೇಳಲಿ. ಅದರ ಹೆಸರು ಹೇಳುವಾಗಲೇ ಲೇಖನಿ ನಡಗುತ್ತದೆ....... ಸೂರ್ಯನು ಸ್ವತಃ ಶಾಖವುಳ್ಳವನಾದರೂ ಇಲ್ಲಿ ಚಳಿಗೆ ಹೆದರಿ ಮೋಡಗಳಿಂದ ತನನ್ನು ಮುಚ್ಚಿಕೊಂಡು ಇಲ್ಲಿಂದ ಅವಸರವಸರವಾಗಿ ಹೋಗಿಬಿಡುತ್ತಾನೆ. ಬೇಸಿಗೆಯಲ್ಲಿ ಹೀಗಾದರೆ ಮಳೆಗಾಲದಲ್ಲಿ ದೇವರೆ ನಮ್ಮನ್ನು ಕಾಪಾಡಬೇಕು......ತರುಣರು ಚಳಿಯಲ್ಲಿ ಅವರ ಅಂಗಾಂಗಗಳ ಬಿಸಿಕಳೆದುಕೊಂಡು ರಾತ್ರಿ ಹೊತ್ತಿನಲ್ಲಿ ತಮ್ಮ ಸಣ್ಣ ಗುಡಿಸಲುಗಳಲ್ಲಿ ಕಾಲುಗಳು ಎದೆಗೆ ಮುಟ್ಟುವಂತೆ ಬಿಲ್ಲಿನ ಹಾಗೆ ಶರೀರವನ್ನು ಮುದುಡಿಕೊಂಡು ಮಲಗುತಿದ್ದರು......ಜಿಗಣೆಗಳು ಅವರನ್ನು, ಅವರ ದನಕರುಗಳನ್ನು ಕಚ್ಚಿ ತಮಗೆ ಬೇಕಾದಷ್ಟು ರಕ್ತಹೀರಿದ ಮೇಲೆಯೇಅವರವ್ನೆಯನ್ನು ಬಿಡುತ್ತದೆ. ಇಲ್ಲಿನಚಳಿಯನ್ನು ವಿವರಿಸುವಾಗ ಬರೆಯುವುದಕ್ಕೆ ಮೊದಲೇ ಲೇಖನಿ ಹಿಡಿದ ಕೈ ಗಡ್ಡೆಗಟ್ಟಿದ ಸಮುದ್ರದೊಳಗೆ ಮುಳುಗಿಸಿದ ಹಾಗೆ ಮರಗಟ್ಟುತ್ತದೆ.

**ಕರ್ನಾಟಕ ಚರಿತ್ರೆ ಸಂಪುಟ–5 [ಪ್ರೊ ಬಿ. ಷೇಕ್ಅಲಿ] 1773**

"ಆಗ ಕೊಡಗನ್ನು ಆಳುತ್ತಿದ್ದವನು ದೇವಯ್ಯ ಹೈದರನ ನೆರವು ಕೋರಿದ ಲಿಂಗಯ್ಯನ ವೈರಿ. ಸೇನೆಯೆದುರು ನಿಲ್ಲಲಾರದೆ ದೇವಯ್ಯನು ಓಡಿ ಹೋಗಿ ಕಾಡುಗಳಲ್ಲಿ ತಲೆಮರೆಸಿಕೊಂಡನು. ಪ್ರಾಂತವು ಸುಲಭವಾಗಿ ಹೈದರನ ವಶವಾಯಿತು. ಸಣ್ಣ ಸಂಸ್ಥಾನ ಕೊಡಗು ಹೈದರನ ಅಗಾಧ ಸೇನೆಯೆದುರು ಹೇಗೆ ನಿಂತೀತು!

○ ಎನ್. ಎಸ್. ದೇವಿಪ್ರಸಾದ್

ಹೈದರನು ಮಡಿಕೇರಿಯ ಕೋಟೆಯನ್ನು ಕೊಡಗಿನ ಮಧ್ಯಭಾಗದಲ್ಲಿ ಶ್ರೀರಂಗಪಟ್ಟಣಕ್ಕೂ. ಮಂಗಳೂರಿಗೂ ಅರ್ಧದ್ದೂ ವಾಗುವ ಸ್ಥಳದಲ್ಲಿ ಕಟ್ಟಿದನು. ಕೊಡಗಿನ ಜೊತೆಗೆಯೇ ಪಶ್ಚಿಮ ಕರಾವಳಿಯ ಇನ್ನೊಂದು ಮುಖ್ಯವಾದ ಕೋಟೆಯಾದ ಬಳುಂ ಅಥವಾ ಮಂಜರಾಬಾದು ಕೊಡಾ ಹೈದರನಿಗೆ ವಶವಾಯಿತು. ಆದರೆ ಹೈದರನು ಮಂಜರಾಬಾದನ್ನು ಅದರ ಅರಸನಿಗೆ ಕೊಟ್ಟು ಮೈಸೂರಿಗೆ ಸಾಮಂತರಾಗಿ ನಿಷ್ಠೆಯಿಂದಿರಲು ಆದೇಶಿಸಿದನು.

"ಬಳಂ ಎನ್ನುವುದು ಐಗೂರಿನ ಇನ್ನೊಂದು ಹೆಸರು. ಅಲ್ಲಿನ ಕೋಟೆ ಮೊದಲೇ ಇದುದ್ದನ್ನು ಒಪ್ಪಿಕೊಳ್ಳುವ

3ನೇ ಪುಟ ನೋಡಿ

# ಕನ್ನಡದಲ್ಲಿ ಸಾಯಿದಾ ರೂಹಿಯ ಸಾಧನೆ

"ಕನ್ನಡದಲ್ಲಿ ಬರೆಯುವುದೆಂದರೆ ನನಗೆ ಎಲ್ಲಿಲ್ಲದ ಸ್ಫೂರ್ತಿ. ಅದರಲ್ಲೂ ಕವನಗಳನ್ನು ರಚಿಸುವುದೆಂದರೆ ಏನೋ ರೋಮಾಂಚನವಾಗಿ ಪದಗಳ ಪುಂಜವೇ ಹರಿದು ಬಂದಂತಾಗಿ ಅದರಲ್ಲಿ ಯಶಸ್ಸು ಸಾಧಿಸಲೇಬೇಕೆಂಬ ಹೆಬ್ಬಯಕೆ ನನ್ನದು"

ಉರ್ದು ಮಾತೃ ಭಾಷೆಯಾಗಿದ್ದರೂ ಕನ್ನಡದ ಬಗ್ಗೆ ಅತೀವ ಪ್ರೇಮ ಬೆಳಸಿಕೊಂಡು ಪ್ರಾವೀಣ್ಯತೆಯನ್ನು ಪಡೆದುಕೊಳ್ಳಲೆತ್ನಿಸುತ್ತಿರುವ ೧೬ರ ಹರೆಯದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ ಪ್ರಥಮ ಪಿ.ಯು.ಸಿ. ವಿದ್ಯಾರ್ಥಿನಿ ಕು| ಸಾಯಿದಾ ಜೆಹರಾ ರೂಹಿಯ ಮನದಾಳದಿಂದ ಹೊರಹೊಮ್ಮಿದ ನುಡಿಗಳಿವು.

ಕವಿಗಳ ಜೀವನ ಕುರಿತು ಶಾಲೆಯ ವಾರ್ಷಿಕ ಸಂಚಿಕೆಗೆ ಸತತವಾಗಿ ಲೇಖನ, ಸಣ್ಣ ಕಥೆಗಳನ್ನು ಬರೆಯುವ ಹವ್ಯಾಸ ಬೆಳೆಸಿಕೊಂಡಿದ್ದ ಈಕೆ ಮೂರನೇ ಮತ್ತು ಐದನೇ ತರಗತಿಯಲ್ಲಿದ್ದಾಗಲೇ 'ಉತ್ತಮ ಕನ್ನಡ ವಿದ್ಯಾರ್ಥಿ' ಎಂಬ ಹೆಗ್ಗಳಿಕೆಗೆ ಪಾತ್ರಳಾದಳು. ಪ್ರೌಢಶಾಲಾ ಹಂತಕ್ಕೆ ಬಂದಾಗ ಮೈಸೂರಿನ ಮರಿಮಲ್ಲಪ್ಪ ಪ್ರೌಢಶಾಲೆಯಲ್ಲಿ ನಡೆದ ಅಂತರ ಪ್ರೌಢಶಾಲಾ ಪ್ರಬಂಧ ಸ್ಪರ್ಧೆಗೆ ಶಾಲೆಯ ಪ್ರತಿನಿಧಿಯಾಗಿಯೂ ಆಯ್ಕೆಯಾಗಿದ್ದಳು.

ಈಗಾಗಲೇ ಕನ್ನಡದಲ್ಲಿ ಹಲವಾರು ಕವನಗಳನ್ನು ಬರೆದಿರುವ ರೂಹಿಗೆ ತಾನೂ ಕುವೆಂಪು ಅವರಂತೆ ಆಗಬೇಕೆಂಬ ಕನಸು. ಮುಸ್ಲಿಮರಾಗಿಯೂ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಖ್ಯಾತನಾಮರಾಗಿರುವ ಕವಿ ಕೆ. ಎಸ್. ನಿಸಾರ್ ಅಹಮದ್ ಮತ್ತು ಚುಟುಕು ಕವಿ ಎಂ. ಅಕಬರ ಆಲಿಯವರ ದಾರಿಯಲ್ಲಿ ಈಕೆಯೂ ಸಾಗುವಳೇ ಎಂಬುದನ್ನು ಈಕೆಯ ಮುಂದಿನ ಬೆಳವಣಿಗೆ ಸಾಬೀತುಪಡಿಸಬೇಕಾಗಿದೆ.

ಫರೂಖಿಯಾ ಬಾಲಕರ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿರುವ ಈಕೆಯ ತಂದೆ ಎಸ್. ಮೀರ್ ಸನಾವುಲ್ಲಾ ಮತ್ತು ಸರ್ಕಾರಿ ಮಹಾರಾಣಿ ಕಲಾ ಕಾಲೇಜಿನಲ್ಲಿ ಇಂಗ್ಲೀಷ್ ಪ್ರೊಫೆಸರ್ ಆಗಿರುವ ತಾಯಿ ನೂರ್ ಫಾತಿಮಾರ ಪ್ರೋತ್ಸಾಹ ಕವಿತಾ ಕೃಷಿಗೆ ಇಂಬು ನೀಡಿದೆ.

ರಾಜ್ಯದ ಮುಸ್ಲಿಂ ವಿದ್ಯಾರ್ಥಿಗಳಲ್ಲೇ S.S.L.C.ಯಲ್ಲಿ ಕನ್ನಡದಲ್ಲಿ ಅತಿ ಹೆಚ್ಚು ಅಂಕ [೧೨೫ ಕ್ಕೆ ೧೨೨] ಗಳನ್ನು ಗಳಿಸಿದ ರೂಹಿಯ ಸಾಧನೆಯನ್ನು ಗುರುತಿಸಿದ ರೋಟೇರಿಯನ್ ಡಾ| ಟಿ.ಎಸ್ ಗುಂಡುರಾವ್‌ರವರು ಜುಲೈ ೧೦ ರಂದು ರೋಟರಿ ಹಾಲ್‌ನಲ್ಲಿ ವಿಶೇಷ ಬಹುಮಾನ ನೀಡಿ ಗೌರವಿಸಿದರು. ಅಂತೆಯೇ ಮಹಿಳಾ ಸಹಕಾರಿ ಬ್ಯಾಂಕ್‌ನವರೂ ಸಹ ರೂಹಿಯ ಸಾಧನೆಯನ್ನು ಗುರುತಿಸಿ ಗೌರವಿಸಿದ್ದಾರೆ. 'ಕನ್ನಡಕ್ಕೆ ಕನ್ನಡಿಗರಿಂದಲೇ ಕೊಡಲಿ ಪೆಟ್ಟು' ಎಂದು ದೂಷಿಸುವಂತಹ ಈ ಕಾಲದಲ್ಲಿ ಸಾಯಿದಾ ಜೆಹರಾರೂಹಿ ಕನ್ನಡ ವಿದ್ಯಾರ್ಥಿಗಳಿಗೆ ಕನ್ನಡಿಗರಿಗೆ ಮಾದರಿಯಾಗಲಿ ಎಂಬುದೇ 'ಸಂಗಾತಿ'ಯ ಆಶಯ.

–ಆಧಾರ

3ನೇ ಪುಟದಿಂದ

ಚರಿತ್ರೆಕಾರರು ಮಡಿಕೇರಿ ಕೋಟೆ ಮೊದಲು ಇರಲಿಲ್ಲವೆನ್ನುವಂತೆ ಬರೆಯಲು ಕಾರಣವಿಲ್ಲ. ಕೊಡಗು ಒಂದು ಅರಸೊತ್ತಿಗೆಯಾಗಲು ಯೋಗ್ಯವಿಲ್ಲದ ಕಾರಣ ಲಿಂಗಯ್ಯನನ್ನು ಸಾಮಂತನಾಗಿ ಮಾಡಿಕೊಳ್ಳುವ ಬದಲು ಬೈದು ಕಳುಹಿಸಿರಬಹುದು.

18, 19 ಮತ್ತು 20ನೇ ಶತಮಾನದಲ್ಲಿ ಸಮಾನ ಸಂಸ್ಕೃತಿಯ ಜನ ಸಮುದಾಯದ ವಾಸದ ನೆಲೆಗಳು ಬೆಳೆದು ಬಂದಿರುವ ರೀತಿಯನ್ನು ಮತ್ತು ಆ ಊರುಗಳು ಕೇಂದ್ರದೊಡನೆ ಇಟ್ಟುಕೊಂಡಿರುವ ಸಂಬಂಧಗಳ ಸ್ವರೂಪವನ್ನು ಅಧ್ಯಯನ ಮಾಡಬೇಕು. ಆಗ ಕೇವಲ ವಿರಾಜಪೇಟೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಮಾತ್ರ ಒಂದು ವಿಭಿನ್ನ ಸಂಸ್ಕೃತಿ ಕಾಣಿಸಿಕೊಳ್ಳುವುದು ಅರ್ಥವಾಗುತ್ತದೆ. ಇಲ್ಲಿ ಮಲೆನಾಡಿನ ಜೀವನಕ್ರಮದೊಂದಿಗೆ ಕೇರಳ ಮತ್ತು ಪಾಶ್ಚಾತ್ಯ ಸಂಸ್ಕೃತಿಯೂ ಕೂಡಾ ಬೆರೆತುಕೊಂಡಿರುವುದರಿಂದ ಮಲೆನಾಡಿನ ಇತರ ಪ್ರದೇಶಗಳಿಂದ ಇದು ಭಿನ್ನವಾಗಿದೆ. ಕಳೆದ ಎರಡು ಶತಮಾನಗಳಿಂದ ಒಟ್ಟಿಗಿದ್ದರೂ ಈ ವಿಭಿನ್ನ ಸಂಸ್ಕೃತಿಯ ಚಿಕ್ಕ ಜನ ಸಮುದಾಯ ಪ್ರತ್ಯೇಕವಾಗಿಯೇ ಉಳಿದಿದೆ.

# ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ 1837 ರ ಸ್ವಾತಂತ್ರ್ಯ ಸಂಗ್ರಾಮ

[ಹಿಂದಿನ ಸಂಚಿಕೆಯಿಂದ]

ಏಳು ಸಾವಿರ ಸೇನೆಯ ಕಡೆಯಿಂದ ಶಾಂತಳ್ಳಿ ಮಲ್ಲಯ್ಯನವರ ಮುಖಂಡತ್ವದಲ್ಲಿ ಸೇನೆಯು ಗುಡ್ಡೇರ ಅಪ್ಪಯ್ಯನವರ ಸೇನೆಯೊಡನೆ ಸೇರಿತು. ಈ ವಿಷಯವನ್ನು ಕ್ಯಾಪ್ಟನ್ ಲೀಹಾರ್ಡಿಯು ತಿಳಿದು ಮಡಿಕೇರಿಯ ಸುತ್ತಮುತ್ತಲಿನ ಜಮ್ಮದ ರೈತರನ್ನು ಕೂಡಿಸಿ, ಗುಡ್ಡೇರ ಅಪ್ಪಯ್ಯನವರ ಸೈನ್ಯವಿದ್ದ ಸ್ಥಳಕ್ಕೆ ಸ್ವಲ್ಪದೂರದಲ್ಲಿ ನಿಲ್ಲಿಸಿ ಘಟ್ಟದ ಕೆಳಗೆ ಹೋಗಿದ್ದ

ಲೇಖಕ : ಪೂಜಾರಿ ಮೊಣ್ಣಪ್ಪ

ಸೈನ್ಯದ ಹಿಂತಿರುಗುವಿಕೆಗಾಗಿ ಕಾಯುತ್ತಿದ್ದರು. ಆ ಸಮಯದಲ್ಲೇ ಮೈಸೂರಿನ ಪಾಂಡವಪುರದಲ್ಲಿದ್ದ 19ನೇ ರಿಜಿಮೆಂಟ್ ಮಡಿಕೇರಿಗೂ ಬಂದು ತಲುಪಿ ಈಗಾಗಲೇ ಕಾಯುತ್ತಿದ್ದ ಬ್ರಿಟೀಷ್ ಸೈನ್ಯದೊಡನೆ ಸೇರಿತು. ಹೀಗೆ ಸೇರಿದ ಸೈನ್ಯವು ಗುಡ್ಡೇರ ಅಪ್ಪಯ್ಯನವರ ಸೈನ್ಯವನ್ನು ಸೋಲಿಸಿತು. ಅಪ್ಪಯ್ಯನವರ ಸೇನೆಯಲ್ಲಿ ಜನಸಂಖ್ಯೆ ದೊಡ್ಡದಾಗಿದ್ದರೂ ಬ್ರಿಟೀಷರ ಸೈನ್ಯದ ಹಾಗೆ ಸುಸಜ್ಜಿತ ಯುದ್ಧ ಉಪಕರಣಗಳಿಲ್ಲದ್ದರಿಂದ ಬ್ರಿಟೀಷರ ಸೈನ್ಯದ ಗುಂಡು ಮತ್ತು ಫಿರಂಗಿಗಳ ಹೊಡೆತವನ್ನು ಸಹಿಸದೆ ಕೆಲವರು ಸತ್ತರು ಇನ್ನು ಕೆಲವರು ದಿಕ್ಕಾಪಾಲಾಗಿ ಓಡಿದರು. ಮುಖಂಡರಾದ ಗುಡ್ಡೇರ ಅಪ್ಪಯ್ಯ ನಾಲ್ಕು ನಾಡಿನ ಉತ್ತು ಮತ್ತು ಶಾಂತಳ್ಳಿಯ ಮಲ್ಲಯ್ಯನವರನ್ನು ಸೆರೆ ಹಿಡಿದರು. ಬೇರೆ ಜನರ ಕೋವಿಯನ್ನು ಕಿತ್ತುಕೊಂಡು ನಂತರ ಹಿಂತಿರುಗಿಸಿದರು.

ಇತ್ತಲಾಗಿ ಮಂಗಳೂರಿನಲ್ಲಿ 13 ದಿನ ರಾಜ್ಯಭಾರ ಮಾಡಿದ ಕಲ್ಯಾಣ ಸ್ವಾಮಿಗೆ ಆಪತ್ತು ಕಾದಿತ್ತು. ತಲಚೇರಿಗೆ ಹೋದ ಬ್ರಿಟೀಷ್ ಸೈನ್ಯಾಧಿಕಾರಿಗಳು ಸುಸಜ್ಜಿತ ಆಯುಧಗಳಾದ ಕೋವಿ ಫಿರಂಗಿಯೊಡನೆ ಹೆಚ್ಚಿನ ಸಂಖ್ಯೆಯ ಸೈನ್ಯದೊಡನೆ ಹಿಂತಿರುಗಿದರು. ಯಾವ ಸದ್ದು ಗದ್ದಲವಿಲ್ಲದೆ ಒಮ್ಮೆಲೆ ಕಲ್ಯಾಣ ಸ್ವಾಮಿಯ ಸೈನ್ಯದ ಮೇಲೆ ಫಿರಂಗಿಗಳ ಹಾಗೂ ಗುಂಡಿನ ಮಳೆಗರೆದರು. ಕೆಲವು ಸೈನಿಕರು ಸತ್ತರು ಕೆಲವರು ಓಡಿ ಹೋದರು. ಕೆಚ್ಚೆದೆಯಿಂದ ಕಾದಾಡುತ್ತಿದ್ದ ಕಲ್ಯಾಣ ಸ್ವಾಮಿ, ರಾಮಗೌಡ, ಅಣ್ಣೇಗೌಡ ಬಂಗರಾಜರನ್ನು ಸೆರೆ ಹಿಡಿದರು. ನಂತರ ಅವರನ್ನು ಮಂಗಳೂರಿನ ಬಿಕ್ರಾನ ಕಟ್ಟೆ ಎಂಬಲ್ಲಿ ಪಾಸಿಗೆ ಕೊಟ್ಟರು.

ಈ ಕಡೆ ಕೊಡಗಿನಲ್ಲಿ ಸೆರೆ ಸಿಕ್ಕಿದ ಚೆಟ್ಟಿಕುಡಿಯ ಕುರ್ತುಕುಡಿಯ, ಶಾಂತಳ್ಳಿ ಮಲ್ಲಯ್ಯ, ಪೆರಾಜೆಯ ಪಾರುಪತ್ತೆಗಾರ ಕೃಷ್ಣಯ್ಯ ನಾಲ್ಕುನಾಡಿನ ಉತ್ತು ಎಂಬುವರನ್ನು ಸೈನ್ಯದ ಖಾನೂನಿನ ಮೇರೆ ವಿಚಾರಣೆ ನಡೆಸಿ ಜೀವಾವಧಿ ಶಿಕ್ಷೆ ವಿಧಿಸಿ ಸಿಂಗಾಪುರಕ್ಕೆ ಮತ್ತು ಕಲ್ಲಿಕೋಟೆಗೆ ಕಳುಹಿಸಿದರು.

ದಂಡನಾಯಕರಾದ ಗುಡ್ಡೇರ ಅಪ್ಪಯ್ಯನವರಿಗೆ ಸ್ವಾತಂತ್ರ್ಯ ಸಂಗ್ರಾಮದ ಸೈನ್ಯದಲ್ಲಿ ಪ್ರಮುಖ ಪಾತ್ರ ವಹಿಸಿದುದಕ್ಕಾಗಿ ಮಡಿಕೇರಿಯ ಕೋಟೆಯ ಮುಂದೆ ಇರುವ ಎತ್ತರದ ಮೈದಾನದಲ್ಲಿ 1837ನೇ ಅಕ್ಟೋಬರ್ 31ರ ಬೆಳಿಗ್ಗೆ 10 ಘಂಟೆಗೆ ಪಾಸಿಗೆ ಕೊಟ್ಟರು. ಈ ರೀತಿಯಾಗಿ ಕೊಡಗಿನ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮವು ಅಂತ್ಯಗೊಂಡಿತು. ಚಿಕ್ಕವೀರರಾಜೇಂದ್ರರು ಸಾಯುವವರೆಗೆ ಕೈದಿಯಾಗಿ ಸತ್ತರು.

ಸಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟೀಷರ ಪರವಾಗಿ ಸ್ವಾತಂತ್ರ್ಯ ಸಂಗ್ರಾಮಗಳನ್ನು ಸದೆ ಬಡಿಯಲು ಸಹಾಯ ಮಾಡಿದ 55 ಜನ ಮುಖ್ಯಸ್ಥರಿಗೆ ಮೂರು ತಲೆಮಾರುಗಳಿಗೆ ವಿಶ್ರಾಂತಿ ವೇತನವನ್ನು ಬ್ರಿಟೀಷ್ ಸರ್ಕಾರ ಇರುವವರೆಗೆ ಕೊಟ್ಟಿತು. ಇವರಲ್ಲಿ 25 ಜನರಿಗೆ ಜೋಡು ಕೊಳದ ಕೋವಿಯನ್ನೂ 14 ಜನರಿಗೆ ಕುದುರೆಗಳನ್ನೂ ಬಹಳ ಜನರಿಗೆ ಒಡಿಕತ್ತಿಯನ್ನೂ ಇನ್ನೂ ಕೆಲವರಿಗೆ ಅವರ ಅರ್ಹತೆಯ ಮೇರೆ ಚಿನ್ನ ಮತ್ತು ಬೆಳ್ಳಿಯ ಪದಕಗಳನ್ನೂ, ಈ ಪದಕಗಳಲ್ಲಿ ಒಂದು ಬದಿಯಲ್ಲಿ ಒಡಿ ಕತ್ತಿ ಮತ್ತು ಪೀಚೆಕತ್ತಿಗಳನ್ನು ಒಂದು ಹಾರದಲ್ಲಿ ಕಟ್ಟಿಸಿಕ್ಕಿಸಿದ ಹಾಗೆ ಬಿಡಿಸಿತ್ತು, ಇನ್ನೊಂದು ಬದಿಯಲ್ಲಿ "For disting-wished conduct and loyalty to British Government Coorg 1837" ಎಂಬುದಾಗಿ ಇಂಗ್ಲೀಷಿನಲ್ಲಿಯೂ ಬರೆದು ಅದರ ಭಾಷಾಂತರವನ್ನು ಕನ್ನಡದಲ್ಲಿ ಕೊಡಲಾಗಿತ್ತು. ಇದೂ ಅಲ್ಲದೆ ಪ್ರತಿಯೊಬ್ಬರಿಗೂ ಉಂಬಳಿ ಭೂಮಿಯನ್ನೂ ಕೊಟ್ಟರು.

[ಮುಗಿಯಿತು]

## ನಿರುದ್ಯೋಗ

ಭಾರತ ದೇಶದಲ್ಲಿ ಇಂದು ಕಾಡುತ್ತಿದೆ
ನಿರುದ್ಯೋಗ
ಇನ್ನು ಮುಂದೆ ನಮಗೆ ಸಿಗುವುದಿಲ್ಲ
ಉದ್ಯೋಗ
ನಿರುದ್ಯೋಗ ಎಂಬುದು ಭಾರತ ದೇಶದ
ಸಂಪುಟದ ಒಂದು ಭಾಗ
ಉದ್ಯೋಗವನ್ನು ನಿರಂತರವಾಗಿ ಚಿಂತನೆ
ಮಾಡಿ ಮೂಲೆ ಹಿಡಿಯುವುದು ಜನರ
ಯೋಗ
ಇದಕ್ಕೆ ಜನಸಂಖ್ಯೆಯೇ ಮುಖ್ಯವಾದ
ಕಾರಣ
ಜನಸಂಖ್ಯೆ ಕಡಿಮೆ ಮಾಡುವುದು ಜನರ
ಪಣ
ಈಗಿನಂತೆ ಜನಸಂಖ್ಯೆ ಮುಂದುವರೆದರೆ
ಪರಿಣಾಮ
ಮುಂದೆ ದೇಶವು ಆಗುವುದು ನಿರ್ನಾಮ

ಕಡಂಬಳ ಮಾ। ಮೋಹನ್ ಗಾಳಿಬೀಡು

## ಹಳ್ಳಿ ಚೆಲುವೆ

ಕಣ್ಣಲ್ಲಿ ಕಣ್ಣಕ್ಕಿ ಮನದೊಳಗೆ ಮನಉಕ್ಕಿ
ನಸುನಗುತ ನೋಡುವಳು ಯಾರು ಚೆಲುವೆ ।
ಊರತೀರದ ಆಚೆ ಹಳ್ಳಿಯಲಿ ಇರುವವಳು
ಆ ಹುಡುಗಿ ಆ ಊರ ಹಳ್ಳಿ ಚೆಲುವೆ ।

ಏನು ಚೆಲುವಿಹಳವಳು ಹಳದಿ ಉಡುಪುಟ್ಟವಳು
ಹಣತೆಯದು ರಾತ್ರಿಯಲ್ಲಿ ಬೆಳಗುವಂತೆ ।
ಒಮ್ಮೆ ನೋಡಲು ಅವಳ ಮರೆತು ಹೋಗುವುದೆಲ್ಲ
ಮನದೊಳಗೆ ತುಂಬಿರುವ ಎಲ್ಲ ಚಿಂತೆ ॥

ಆ ನೋಟ ವಯ್ಯಾರ ಮಾಡದೆಯೆ ಅವತಾರ
ಹಳ್ಳಿಯಾ ಹೆಣ್ಣವಳು ದಿನವು ಚೆಲುವೆ ।
ತನ್ನ ಮನೆತನ ತಿಳಿದು ನಡೆಯುವಳು ಅದರಂತೆ
ಅವಳ ಮನದೊಳಗಿಹುದು ದಿನವು ಗೆಲುವೆ ॥

ಬಂಗಾರಕೊಪ್ಪುವಾ ಅವಳ ಗುಣ ವೈಬಣ್ಣ
ಸಿಂಗಾರ ಬೇಡದಕೆ ಅಂತ ಚೆಲುವೆ ।
ನಾಚುತಲಿ ಮಾತಾಡಿ ಮನಸೂರೆಗೊಳ್ಳುವಳು
ಮಾನಸಾ ಮನೆಗೊಲಿವ ಪುಣ್ಯ ಅವಳೆ ॥

ಕಷ್ಟ ಸುಖಗಳ ನಡುವೆ ಅರಳಿರುವ ಹೆಣ್ಣವಳು
ಉಳಿಸುವಳು ಎಂದೆಂದು ತೌರುಮನೆ ಹೆಸರು ।
ಹಳ್ಳಿವನ ಸಿರಿ ನಡುವೆ ಮಲ್ಲಿಗೆಯೆ ಅಂತಿಹಳು
ಹೊಕ್ಕಮನೆಯನು ಚೊಕ್ಕ ಬೆಳಗುವವಳು ॥

○ ಹೊದ್ದೆಟ್ಟಿ ಭವಾನಿಶಂಕರ್, ಬೆಂಗಳೂರು

## ಹಿತನುಡಿಗಳು

ಈ ಮೂವರನ್ನು ಸದಾ ಆದರದಿಂದ ಕಾಣು
ತಂದೆ, ತಾಯಿ, ಗುರು
ಈ ಮೂವರಿಗೆ ಚೇಷ್ಟೆ ಮಾಡದಿರು
ಮುದುಕ, ಹುಚ್ಚ, ಮೂರ್ಖ
ಈ ಮೂವರನ್ನು ನಿಯಮದಿಂದ ಪಾಲಿಸು
ಪ್ರಾರ್ಥನೆ, ಊಟ, ವ್ಯಾಯಾಮ
ಈ ಮೂರಕ್ಕೇ ಸದಾ ಹೆದರುತ್ತಿರು
ಸುಳ್ಳು, ನಿಂದೆ, ಕಳ್ಳತನ
ಈ ಮೂರರಿಂದ ದೂರ ಇರು
ಕುಡಿತ, ಜೂಜು, ಧೂಮಪಾನ
ಈ ಮೂರರನ್ನ ನಂಬಬೇಡ
ಕಳ್ಳ, ದುಷ್ಟ, ಬೆಂಕಿ.

○ ಮಳ್ಳನ ಎಸ್. ವಸಂತ್ (ವಿನು) ಮಕ್ಕಂದೂರು

## ಕರೆ

ಓ ಗೌಡ ಯುವಕ ನೀ ಕೇಳು ಈ ಕರೆಯ
ಓ ಗೌಡ ಯುವತಿ ನೀ ಕೇಳು ಈ ಮೊರೆಯ
ಗೌಡ ನಾನೆಂಬ ಸ್ವಾಭಿಮಾನವಿರಲಿ
ಎದೆಗುಂದದಿರುನೀ ಏನೇ ಬರಲಿ

ಒಂದೊಮ್ಮೆ ಗೌಡನೀ ಬಿದ್ದಿದ್ದೆ ಹಿಂದೆ
ಎಚ್ಚೆತ್ತು ಎದ್ದುನೀ ಈಗ ನಡೆ ಮುಂದೆ
ವಿದ್ಯೆಗೂ ಬುದ್ಧಿಗೂ ನಿನಗಿಲ್ಲ ಕೊರತೆ
ನಿನ್ನ ಶಕ್ತಿಯನೇ ನೀನೇಕೆ ಮರೆತೆ ?

ಸೈನ್ಯಕ್ಕೆ ಸೇರಿನೀ ಸೇನಾಪತಿಯಾಗು
ರಾಜಕೀಯ ಸೇರಿನೀ ರಾಷ್ಟ್ರಪತಿಯಾಗು
ವಕೀಲನಾಗಿ ಅನ್ಯಾಯವ ಅಳಿಸು
ನ್ಯಾಯಾಧೀಶನಾಗಿ ನ್ಯಾಯವನು ಉಳಿಸು

ವೈದ್ಯನೀನಾಗಿ ಪ್ರಾಣಗಳ ಉಳಿಸು
ಜನ ಸೇವೆ ಮಾಡಿ ಕೀರ್ತಿಯನು ಗಳಿಸು
ಇಂಜಿನಿಯರ್ ಆಗಿ ದೇಶವನು ಕಟ್ಟು
ದೀನರಿಗಾಗಿ ದುಡಿ ಸ್ವಾರ್ಥವನು ಬಿಟ್ಟು

ಕೀಳರಿಮೆ ನಿನ್ನಿಂದ ದೂರವಿರಲಿ
ಹೇಡಿತನ ನಿನ್ನ ಬಳಿ ಸುಳಿಯದಿರಲಿ
ಕಷ್ಟ ಬಂದವರ ಕೈಹಿಡಿದು ನಡೆಸು
ಗೌಡ ಜನಾಂಗದ ಸಂಸ್ಕೃತಿಯ ಉಳಿಸು

ಭ್ರಷ್ಟ ಅಧಿಕಾರಿ ನೀನಾಗಬೇಡ
ದುಷ್ಟ ರಾಜಕಾರಣಿ ನೀನಾಗಬೇಡ
ಕೆಟ್ಟ ನಾಯಕರಿಗೆ ನೆರವಾಗಬೇಡ
ಕೊಟ್ಟ ಮಾತಿಗೆ ನೀ ತಪ್ಪಿ ನಡೆಬೇಡ

ವಾಮಮಾರ್ಗದಲಿ ನೀ ನಡೆಯಬೇಡ
ಕೋಮುಸೌಹಾರ್ದವ ನೀ ಮರೆಯಬೇಡ
ನೇಮನಿಯಮಗಳ ನೀ ಮುರಿಯಬೇಡ
ಶ್ರಮದ ಬದುಕನ್ನು ಬಿಟ್ಟು ನೀ ನಡೆಬೇಡ

ಕೀರ್ತಿ ನಿನ್ನಿಂದ ಗೌಡರದು ಏರಿದರೆ
ಕೀರ್ತಿಪತಾಕೆ ನಿನ್ನಿಂದ ಹಾರಿದರೆ
ಸಾರ್ಥಕವಾಗುವುದು ಈ ನನ್ನ ಕರೆ
ಸಾರ್ಥಕವಾಗುವುದು ಈ ನನ್ನ ಮೊರೆ.

○ ಬೈತಡ್ಕ ಹೇಮ ಕುಂಜಪ್ಪ, ಪಾಲೂರು

# ಯೌವ್ವನ

ಯೌವ್ವನ ಜೀವನದಲ್ಲಿ ಘಳಿಗೆಯಷ್ಟೆ. ಎಷ್ಟೋ ಕುರೂಪಿಯು ಯೌವ್ವನದಲ್ಲಿ ಸೌಂದರ್ಯವಾಗಿ ಕಾಣುತ್ತಾರೆ. ಸೌಂದರ್ಯಕ್ಕೂ ಯೌವ್ವನಕ್ಕೂ ನಂಟು.

ಯೌವ್ವನದಲ್ಲಿ ಒಂದೇ ಒಂದು ಹೆಜ್ಜೆ ತಪ್ಪಿದರೆ ಜೀವನದ ಸೌಂದರ್ಯ ಮಣ್ಣು ಪಾಲಾಗುವುದು. ಯೌವ್ವನದಲ್ಲಿ ಅತಿ ಮುಖ್ಯ ವಿಚಾರಗಳು, ಒಳ್ಳೆ ವಿಚಾರ, ಆಚಾರ, ಬುದ್ಧಿ ಇವು ಯೌವ್ವನದ ಆಭರಣಗಳು. ವಿಚಾರ ಕೆಟ್ಟದಾದರೆ ಆಚಾರ ಕೆಟ್ಟದಾಗುತ್ತದೆ. ವಿಚಾರ, ಆಚಾರಗಳೆರಡೂ ಕೆಟ್ಟದಾದರೆ ಬುದ್ಧಿ ಮೆದುಳನ್ನು ಬಿಟ್ಟು ಬಿಡುತ್ತದೆ.

ಯೌವ್ವನದಲ್ಲಿ ಮುಖ್ಯ ಉದ್ದೇಶ ಹಣ ಗಳಿಸುವುದು. ಹಣ ಗಳಿಕೆಗೆ ಅನೇಕ ದಾರಿಗಳುಂಟು. ನೈತಿಕ, ಅನೈತಿಕ ಎಂದೆಲ್ಲಾ ಬಗೆವುಂಟು. ಹಣವಂತರೆಲ್ಲಾ ಭಾಗ್ಯವಂತರೆಂದು ನಮ್ಮ ಭಾವನೆ. ಎಲ್ಲಿಯೋ ಒಂದೆರಡು ಇರಬಹುದು. ಹಣವಂತರಿಗೆ ತಿನ್ನಲು, ಚೆಲ್ಲಲು ಬೇಕಾದಷ್ಟಿರುತ್ತದೆ. ಆದರೆ ಅವರಿಗೆ ಹಸಿವು ಉಣ್ಣಲು, ಉಂಡದ್ದು ಅರಗಿಸಲು ಸಾಧ್ಯವಿಲ್ಲ. ಅವರಿಗೆ ಬೇಕಾದಷ್ಟು ಕೆಲಸದಾಳುಗಳಿರುತ್ತಾರೆ. ಆದರೆ ಶಾಂತಿ ಇಲ್ಲ, ನೆಮ್ಮದಿ ಇಲ್ಲ. ಶಾಂತಿ ನೆಮ್ಮದಿಯಿರುವುದು ಅಪರೂಪ.

ಯೌವ್ವನದಲ್ಲಿ ಹಣಗಳಿಕೆಗೆ ನಾವು ಒಳ್ಳೆ ರಚನಾ ಕ್ರಮವನ್ನು ಮಾಡಿಕೊಳ್ಳಬೇಕು. ರಚನಾ ಕ್ರಮದಲ್ಲಿ ಸದ್ಗುಣ, ಧರ್ಮನಿಷ್ಠೆ, ಸಮರ್ಪಣೆ ಭಾವ ಇವು ತುಂಬಿರಬೇಕು. ಯೌವನದಲ್ಲಿ ಶ್ರೇಷ್ಠತೆಯ ನಡತೆ, ಗುಣವಿರಲೇಬೇಕು.

ನಡತೆ ಅಥವಾ ಗುಣ ಎಂದರೇನು ? ಇದೊಂದು ನಟನೆ ಅಲ್ಲ. ನಡತೆ ಎಂದರೆ ಸತ್ಯಪರಿಪಾಲನೆ. ಸತ್ಯಕ್ಕೆ ನಿಶ್ಚಲ ಸ್ಥಿರಾವಲಂಬನೆ, ನಿಷ್ಕಪಟ ಪ್ರೀತಿ, ತ್ಯಾಗ, ನಿಸ್ವಾರ್ಥ ಸೇವೆ. ಇವೇ ನಡತೆಯ ಸದ್ಗುಣಗಳು. (Character-ನಡತೆ)

ಈ ಮೇಲಿನ ಸದ್ಗುಣಗಳಲ್ಲಿ ನಮ್ಮ ಸಮಾಜದ ಯೌವ್ವನರು ಹಣ ಸಂಪಾದನೆ ಮಾಡಿ, ತಮ್ಮ ಸಂಸಾರವನ್ನೂ, ನಮ್ಮ ಸಮಾಜವನ್ನು ಉನ್ನತಿಗೇರಿಸಬಹುದು. ನಾವು ಸಮಾಜ ಜೀವಿಗಳು. ಒಬ್ಬ ಇಲ್ಲದಿದ್ದರೆ ಸಮಾಜ ಹಾಳಾಗದು. ಆದರೆ ಸಮಾಜವಿಲ್ಲದಿದ್ದರೆ ಒಬ್ಬನೂ ಉನ್ನತಿಯನ್ನು ಪಡೆಯಲಾರನು. ಆದ್ದರಿಂದ ಯೌವ್ವನದಲ್ಲಿ ಹೆಣ್ಣು ಗಂಡು, ಗಳಿಸಿ, ಉಳಿಸಿ ಸಮಾಜವನ್ನು ಬೆಳಸಿ. ಸಮಾಜವೇ ನಮ್ಮ ಜೀವನದ ಬೆಳಕು. ನಾವು ಬದುಕಬೇಕಾದರೆ ಸಮಾಜ ಬೇಕು. ಸಮಾಜವಿರಬೇಕಾದರೆ ನಮ್ಮ ತ್ಯಾಗ ಬೇಕು. ಇದಕ್ಕೆ ಮುಖ್ಯ ನಮ್ಮ ಯೌವ್ವನದ ಗಳಿಕೆ.

○ ಸಿ. ಜಿ. ಮುತ್ತಪ್ಪ,
ಕುಶಾಲನಗರ.

# ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು

ಒಂದು ಊರಿನಲ್ಲಿ ಶ್ಯಾಮಣ್ಣನೆಂಬ ರೈತನು ಇದ್ದನು. ಅವನು ಇಡೀ ಒಂದು ದಿನ ತನ್ನ ಹೊಲದಲ್ಲಿಯೇ ಕೆಲಸ ಮಾಡುತ್ತಾ ಬೆಳೆಗಳನ್ನು ಬೆಳಸಿ ಮಾರಿ ಜೀವನ ಸಾಗಿಸುತ್ತಿದ್ದನು. ಒಂದು ದಿನ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಕೆಲಸ ಮಾಡಿ ಸುಸ್ತಾಗಿ, ಮರದ ಕೆಳಗೆ ವಿಶ್ರಾಂತಿಗಾಗಿ ಕುಳಿತನು. ಸ್ವಲ್ಪ ಹೊತ್ತಿನಲ್ಲಿಯೇ ಅವನಿಗೆ ಜೊಂಪು ಹತ್ತಿತು. ಅವನು ಅಲ್ಲಿಯೇ ನೆರಳಿನಲ್ಲಿ ಮಲಗಿಕೊಂಡನು. ಎರಡು ಕೈಯನ್ನು ತಲೆಗೆ ದಿಂಬಿನಂತೆ ಇಟ್ಟು, ಮಲಗಿದನು. ಸ್ವಲ್ಪ ಹೊತ್ತಿನಲ್ಲಿಯೇ ತಾನು ಶ್ರೇಷ್ಠ, ತಾನು ಶ್ರೇಷ್ಠ ಎಂದು ಅವನ ಕೈಬೆರಳುಗಳು ಜಗಳವಾಡಲು ಪ್ರಾರಂಭಿಸಿತು. ಮೊದಲನೆ ಹೆಬ್ಬೆರಳು, ಹೇಳಿತು ನಾನು ಮೊದಲನೆಯವನು, ಅಲ್ಲದೆ ಹಿರಿಯವನು ನಾನು ಹೇಳಿದಂತೆ ನೀವಿರಬೇಕು. ಹಾಗಾಗಿ ನಾನುಶ್ರೇಷ್ಠ ಎಂದಿತು. ಎರಡನೇ ಬೆರಳು ಹೇಳಿತು, ಯಾವುದೇ ವಸ್ತುವನ್ನು ತೋರಿಸಬೇಕಾದರೆ ನನ್ನನ್ನೇ ಉಪಯೋಗಿಸುತ್ತಾರೆ. ಆದ್ದರಿಂದ ನಾನೇ ಶ್ರೇಷ್ಠ ಎಂದಿತು. ಮೂರನೇ ಬೆರಳು ಹೇಳಿತು ನಿಮ್ಮೊಂದಿಗೆ ನಾನು ನಿಂತರೆ ನಾನೇ ನಿಮ್ಮೆಲ್ಲರಿಗಿಂತ ಉದ್ದ ಇದ್ದೇನೆ. ಹೀಗಿರುವಾಗ ನಾನು ಶ್ರೇಷ್ಠ ಎಂದಿತು. ನಾಲ್ಕನೇ ಬೆರಳು ಅತ್ಯಂತ ಗರ್ವದಿಂದ ಹೇಳಿತು, ನನಗೆ ಚಿನ್ನ, ಬೆಳ್ಳಿ, ವಜ್ರಗಳ ಉಂಗುರದಿಂದ ಅಲಂಕರಿಸುತ್ತಾರೆ. ಹಾಗಿರುವಾಗ ನಾನೇ ಶ್ರೇಷ್ಠ ಎಂದಿತು. ನಾಲ್ಕು ಬೆರಳುಗಳು ಪ್ರಶ್ನಾತ್ಮಕ ದೃಷ್ಟಿಯಿಂದ ಕಿರುಬೆರಳನ್ನು ನೋಡಿದವು. ನಿಮ್ಮ ಪ್ರಶ್ನೆಗೆ ನಾನು ಉತ್ತರ ಹೇಳುತ್ತೇನೆ ಬನ್ನಿ ಎಂದು ದೇವಸ್ಥಾನಕ್ಕೆ ಕರೆದುಕೊಂಡು ಹೋಯಿತು. ಎಲ್ಲರೂ ಸಾಲಾಗಿ ನಿಂತು ದೇವರಿಗೆ ಕೈಮುಗಿದರು. ಆಗ ಕಿರುಬೆರಳು ಹೇಳಿತು. ಈಗ ನೀವೇ ನೋಡಿ, ಯಾರಿಗೆ ದೇವರ ಮುಂದೆ ಮೊದಲ ಸ್ಥಾನವಿದೆಯೋ ಅವರೇ ಶ್ರೇಷ್ಠರು. ನಾನು ದೇವರಿಗೆ ಅತೀ ಸಮೀಪದಲ್ಲಿಯೇ ಇದ್ದೇನೆ. ನನ್ನ ನಂತರ ನೀವೆಲ್ಲರೂ ಎಂದು ಹೇಳಿತು. ಉಳಿದ ನಾಲ್ಕು ಬೆರಳುಗಳು ಕಿರು ಬೆರಳಿನ ಮಾತಿಗೆ ಬೆರಗಾದವು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದಲ್ಲವೆ ?

ಅಷ್ಟೊತ್ತಿಗೆ ಶ್ಯಾಮಣ್ಣನಿಗೆ ಎಚ್ಚರವಾಯ್ತು. ಅವನು ತನ್ನ ಮನೆಕಡೆ ಹೊರಟನು. ಕೈ ಬೆರಳುಗಳು ತಮ್ಮ ಜಗಳವನ್ನು ನಿಲ್ಲಿಸಿದವು.

○ ಸಂಗ್ರಹ : ಹುಲಿಮನೆ ರಮೇಶ್,
ಮೈಸೂರು.

### ಮೈಸೂರು ದಸರಾ ವಸ್ತುಪ್ರದರ್ಶನದಲ್ಲಿ

## ಕೊಳಂಬೆ ಯಾದವ ಭಾನುಪ್ರಕಾಶ್‌ಗೆ ಪ್ರಶಸ್ತಿ

ಮೈಸೂರಿನಲ್ಲಿ ನಡೆದ 1997-98 ನೇ ಸಾಲಿನ ದಸರಾ ವಸ್ತು ಪ್ರದರ್ಶನದಲ್ಲಿ ಕರ್ನಾಟಕ ಲಲಿತಕಲಾ ಆಶ್ರಯದಲ್ಲಿ ನಡೆದ ಚಿತ್ರಕಲಾ ವಿಭಾಗದಲ್ಲಿ ದ್ವಿತೀಯ ಬಹುಮಾನ ಪಡೆದಿರುತ್ತಾನೆ. ಈ ಪ್ರದರ್ಶನ ಸ್ಪರ್ಧೆಯಲ್ಲಿ ಅಖಿಲ ಕರ್ನಾಟಕದ ಎಲ್ಲಾ ಕಲಾವಿದರು ಭಾಗವಹಿಸಿದ್ದರು. ಈ ಸ್ಪರ್ಧೆಯಲ್ಲಿ ಸ್ಪರ್ಧಿಸಿ, ಬಹುಮಾನ ಗಿಟ್ಟಿಸಿದ ಪ್ರತಿಭೆ ಕೊಡಗಿನ ಚೆಟ್ಟಳ್ಳಿಯ ಕೊಳಂಬೆ ಮನೆ ಯಾದವನವರ ಪ್ರಥಮ ಪುತ್ರ ಭಾನುಪ್ರಕಾಶ್. ಇದು ಅರೆಭಾಷಿಕಾ ಜನಾಂಗಕ್ಕೆ ಸಂದ ಗೌರವ ಹಾಗೂ ಹೆಮ್ಮೆಯ ಸಂಗತಿಯಾಗಿದೆ.

18ವರ್ಷ ವಯಸ್ಸಿನ ಭಾನುಪ್ರಕಾಶ್ ಪ್ರಸ್ತುತ ಮೈಸೂರಿನ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿದ್ದು, 3ನೇ ವರ್ಷದ ಪೆಯಿಂಟಿಂಗ್ ಡಿಪ್ಲೋಮವನ್ನು ಮಾಡುತ್ತಿದ್ದಾನೆ. ಈ ಕೋರ್ಸು 5ವರ್ಷಗಳ ಅವಧಿಯದಾಗಿದೆ. ಈತ ತನ್ನ ಪ್ರಾಥಮಿಕ ಶಿಕ್ಷಣವನ್ನು ಚೆಟ್ಟಳ್ಳಿಯಲ್ಲಿ ಮುಗಿಸಿ, ಪ್ರೌಢವಿದ್ಯೆಯನ್ನು ಇಲ್ಲಿಯೇ ಅಭ್ಯಸಿಸುವಾಗ ಇವನಿಗೆ ಸಿಕ್ಕಿದ್ದು ಕುತಿಗಲ್ ಎನ್ನುವ ಡ್ರಾಯಿಂಗ್ ಮಾಸ್ಟರ್. 7ನೇ ಇಯತ್ತೆಯಲ್ಲಿರುವಾಗಲೇ ದೈವದತ್ತವಾಗಿ ಬಂದಂತಹ ಈ ಕಲೆಯ ಅಭಿವೃದ್ಧಿಗೆ ಸಹಕರಿಸಿದರೆ ಈ ಕುತಿಗಲ್ ಮಾಸ್ಟರ್. S.S.L.C. ನಂತರ ಮೈಸೂರಿನ "ಕಲಾನಿಕೇತನ" ಸ್ಕೂಲ್ ಆಫ್ ಆರ್ಟ್ಸ್, ಇಲ್ಲಿ ಪ್ರಥಮ, ದ್ವಿತೀಯ ವರ್ಷದ D.M.C. ಕೋರ್ಸು ಮುಗಿಸಿ, 3ನೇ ವರ್ಷದ ಪೆಯಿಂಟಿಂಗ್ ಮತ್ತು ಡಿಪ್ಲೋಮಾ A.M.G.D. ಮಾಡುತ್ತಿದ್ದಾನೆ. ಈ ಮೇಲಿನ ಬಹುಮಾನ ಈತನ ನಾಟ್ಯ ಗಣಪತಿಯ ರೇಖಾ ಚಿತ್ರಕ್ಕೆ ಲಭಿಸಿದ್ದಾಗಿದೆ. ಈತ ಇಷ್ಟೇ ಅಲ್ಲದೆ ಪೆಯಿಂಟಿಂಗ್, ಗ್ರಾಫಿಕ್, ರೇಖಾಚಿತ್ರ, ಭಾವಚಿತ್ರ, ವ್ಯಕ್ತಿಚಿತ್ರ, ಲ್ಯಾಂಡ್‌ಸ್ಕೇಪ್ ಇತ್ಯಾದಿ ಮಾಡುತ್ತಿದ್ದಾನೆ.

ಇವನ ತಂದೆ ಯಾದವ ಉತ್ತಮ ಕೃಷಿಕ ಮತ್ತು ನಿವೃತ್ತ ಮಿಲಿಟರಿ ಅಧಿಕಾರಿಯಾಗಿದ್ದರೆ, ತಾಯಿ ಜಾನಕಿ ಸುಳ್ಯ ತಾಲ್ಲೋಕಿನ ಪಂಜ ಗ್ರಾಮದ ಕಡಂಬಳ ಪುಟ್ಟಣ್ಣ ಗೌಡರ ಪುತ್ರಿಯಾಗಿದ್ದಾರೆ. ಈತನ ಸಹೋದರ ಗಿರೀಶ್, ಗಾಳಿಬೀಡಿನ ನವೋದಯ ಶಾಲೆಯಲ್ಲಿ 2ನೇ ವರ್ಷದ P.U.C.ಯನ್ನು, ಕಿರಿಯ ಚೈತನ್ ಸುಳ್ಯದ N.M.C. ಕಾಲೇಜಿನಲ್ಲಿ ಮೊದಲ ವರ್ಷದ P.U.C. ಯನ್ನು ಅಭ್ಯಸಿಸುತ್ತಿದ್ದಾನೆ.



ಯಾಥವ ಭಾನುಪ್ರಕಾಶ್

ಮುಂದೆ ಈತ ಡಿಪ್ಲೋಮಾ ಇನ್ ಆರ್ಟ್ಸ್ ಆರ್ಟ್ಸ್ ಮಾಸ್ಟರ್, G.D., [ಗ್ರಾಜುವೇಟ್ ಡಿಗ್ರಿ] ಮಾಡಲು ಉದ್ದೇಶಿಸಿದ್ದಾನೆ. ಜೀವನದಲ್ಲಿ "ರವಿವರ್ಮ" ನಂತಹ ಆದರ್ಶ ಕಲಾವಿದನಂತಾಗಲು ಪ್ರಯತ್ನಿಸುವೆ ಎನ್ನುವ ಈ ಪೋರನಿಗೆ ಉಜ್ವಲ ಭವಿಷ್ಯವಿದೆ. ಈತನ ಎಲ್ಲಾ ಆಶೆ ಆಕಾಂಕ್ಷೆಗಳು ಈಡೇರುವಂತಾಗಲಿ ಎಂದು ಅರೆಭಾಷಿಕ ಗೌಡ ಜನಾಂಗದ ಪರವಾಗಿ "ಕೊಡಗು ಸಂಗಾತಿ" ಹೃದಯ ತುಂಬಿ ಹಾರೈಸುತ್ತದೆ.

○ ಪಟ್ಟಡ ಪ್ರಭಾಕರ್

---

### ಗೌಡ ಜನಗಳ ನಾಡು

ಎಂದೆಂದು ಎಲ್ಲೆಲು ಬೆಳೆಯುತ್ತಿದೆ  
ನಮ್ಮ ಈ ಗೌಡ ಜನಗಳ ನಾಡು  
ಕಾವೇರಿ ತಾಯಿ ಹುಟ್ಟಿದ  
ನಮ್ಮ ಈ ಗೌಡರ ಕೊಡಗಿನ ನಾಡು  
ಎಲ್ಲರ ಮನೆ ಮನೆಯಲ್ಲಿ ಬೆಳೆಯುತ್ತಿದೆ  
ನಮ್ಮೆಲ್ಲರ ಈ ಹೊಸ ಹಾಡು  
ಕೊಡಗು ಸಂಗಾತಿಯ ಈ ಹೊಸ ನಾಡು  
ಕೊಡಗಿನ ಗೌಡ ಜನಗಳ ಹೆಮ್ಮೆಯ  
ಈ ಮಮತೆಯ ನಾಡು .  
ಕೊಡಗು ಸಂಗಾತಿಯೇ ನಮ್ಮ ನಾಡ  
ನಮ್ಮ ಕೊಡಗಿನ ಗೌಡ ಜನಗಳ ಕರುನಾಡು

○ ಕರ್ಣಯ್ಯನ ಎಸ್ ಹರೀಶ್

### ರಾಜಕಾರಣಿ

ಚುನಾವಣಾ ಕಣಕ್ಕಿಳಿದು  
ಮುಗ್ದ ಜನರಿಗೆ ಹಣದಿಂದ ಮೋಡಿಮಾಡಿ  
ಜಯವನ್ನು ತನ್ನದಾಗಿಸಿ  
ಮಂತ್ರಿಪದವಿ ಗಿಟ್ಟಿಸಿ  
ಇದ್ದುದೆಲ್ಲವನ್ನು ದೋಚಿ  
ಬಲೂನಿನಂತೆ ಹೊಟ್ಟೆ ಊದಿಸಿಕೊಂಡು  
ಮುಂದಿನ ಚುನಾವಣೆಯಲ್ಲಿ  
ಸೋತು ಸುಣ್ಣವಾಗಿ  
ಸವೆದುಹೋದ ಪಾದರಕ್ಷೆಯಂತೆ  
ಮೂಲೆಗೆ ಸೇರುವ ವ್ಯಕ್ತಿಯೇ  
ರಾಜಕಾರಣಿ.

○ ಅಂಚೆ ಮನೆ ಸುಧಿ,  
ಅಭ್ಯತ್‌ಮಂಗಲ

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

ಹೆ.ವ. : ನನ್ಮ ಬಾಲಕಿಯು ಚಿಕ್ಕದಾಗಿರುವ ಕಾಲದಿಂದಲೂ] ಮಾನವರ ಮನಗುಣವನ್ನು ಅರಿಯಳು. ಅತ್ತೆಮ್ಮನವರ ಅಡಿಗೆ ಕೆಲಸ ತಿಳಿಯಲಿಲ್ಲ. ಭಾವ ಮೈದುನರ ಭಾವನೆ ಗೊತ್ತಿಲ್ಲ. ಅಕ್ಕ ತಂಗಿಯವರ ಹಂಗಿಗೆ ಒಳಪಟ್ಟವಳಲ್ಲ. ಕುಟುಂಬದ ಕೂಟಕ್ಕೆ] ಕೂಡಿದವಳಲ್ಲ,

ಕೃಪೆ :
**ಗೌಡ ಸಂಸ್ಕೃತಿ ಕುಟುಂಬ ಕೈಪಿಡಿ**

ಹೀಗಿರುವಾಗ ತಮ್ಮಿಧ್ಯೆ ಏನಾದರೂ ಮಾತಿನಲ್ಲಿ ಕಲಹಗಳು ಉಂಟಾದರೆ ಇಂತಹ ಕಲಹಗಳನ್ನು ಉಪಶಮನ ಮಾಡುವಂತಹ ಉಪಶಮಕರು ಯಾರಯ್ಯ ?

ದಿ.ಮು. : ವರನಯ್ಯ.

ಹೆ.ವ. : ಹಾಗಾದರೆ, ದಿಬ್ಬಣದ ಮಹಾಶಯರೇ, ನಾವು ಹೇಳಿದ ಮಾತಿಗೆ ಎರಡೆನ್ನದೆ ನಾವು ಕೊಡುವ ಕನ್ಯಾರತ್ನವನ್ನು ಭಕ್ತವತ್ಸಲನು ಭಕ್ತರನ್ನು ಪ್ರೀತಿಸುವಂತೆಯೂ, ನರಹರಿಯು ಕೂರ್ಮನನ್ನು ಕಾಯುವಂತೆಯೂ, ಹಸು ತನ್ನ ಎಳೆಗರುವನ್ನು ಪ್ರೀತಿಸುವಂತೆಯೂ, ಪ್ರೀತಿಸುವಿರೆಂಬುದಾಗಿ ಅಗ್ನಿಸಾಕ್ಷಿಯಾಗಿ ನಾವು ನಂಬುತ್ತೇವೆ. ಇನ್ನು ಮುಂದೆ ಈ ನವ ದಂಪತಿಯರನ್ನು ಭಕ್ತವತ್ಸಲನು ನಾಭಿಕಮಲದಲ್ಲಿ ಬ್ರಹ್ಮನಿಗೆ ಸ್ಥಾನವಿತ್ತವನಾದ ಆ ಕ್ಷೀರಶಯನ ಶ್ರೀಮನ್ನಾರಾಯಣರೇ ಕಾಪಾಡಲೆಂದು] ನಾವೆಲ್ಲರೂ ವಂದಿಸೋಣ.

"ಹತ್ತು ಕುಟುಂಬ ಹದಿನೆಂಟು ಗೋತ್ರ ಕೇಳಿ ಕುಲಸ್ಥರ ಸಭೆಯಲ್ಲಿ ಸಮಸ್ತರ ಸಂಗಡ ಕೇಳಿ ಹೆಣ್ಣು ಗಂಡನನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿ ಕೊಡುವಂತೆವೇ" ಎಂದು ಮೂರು ಬಾರಿ ಹೇಳಿ ಹೆಣ್ಣು ಗಂಡನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿಕೊಡುವರು. ಒಡನೆಯೆ ಓಲಗದವರು ವಾದ್ಯ ಮಾಡುವರು. ಹೆಣ್ಣು ಸಿಕ್ಕಿದ ಶುಭ ಸಂಕೇತವಾಗಿ ದಿಬ್ಬಣದ ಕಡೆಯವರು ತಮ್ಮ ಸಂತೋಷ ವ್ಯಕ್ತಪಡಿಸಲು ಕುಣಿತದೊಂದಿಗೆ ಶುಭ ಘೋಷಣೆಯನ್ನು ಮಾಡುವರು.

**2. ಹೆಣ್ಣು ಗಂಡು ವಹಿಸಿ ಕೊಡುವುದು :** [ಇನ್ನೊಂದು ಪದ್ಧತಿ]

ಹೆ. ಕ. : ಹೆಣ್ಣಿನ ಕಡೆಯವರು
ಗಂ. ಕ. : ಗಂಡಿನ ಕಡೆಯವರು.

ಹೆ. ಕ. : ದಿಬ್ಬಣದ ಮುಖ್ಯಸ್ಥರು ಯಾರಯ್ಯ ?

ಗಂ.ಕ. : ನಾವಯ್ಯ

ಹೆ.ಕ. : ಯಾವ ನಾಡು, ಯಾವ ಊರು, ಯಾವ ಮನೆಯವರು ?

ಗಂ.ಕ. : [ಸೂಕ್ತವಾದ ಪರಿಚಯ ಹೇಳುತ್ತಾರೆ.]

ಹೆ.ಕ. : ಸಭಿಕರೇ, ನಾನು ಹೇಳುವ ಮಾತುಗಳನ್ನು ನೀವುಗಳು ಕೇಳಿಕೊಂಡು ತಪ್ಪುಗಳಿದ್ದರೆ ಮನ್ನಿಸಿ, ಭಾಗ್ಯ ಸಂಪನ್ನರಾದ ಮತ್ತು ಮಹಾನುಭಾವರಾದ ನೀವುಗಳು ನನಗೆ ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಅಯ್ಯಾ, ನಮ್ಮ ಕನ್ಯೆಯು ಹಾಲು ಅನ್ನವನ್ನು ಊಟ ಮಾಡಿಕೊಂಡು, ತೂಗು ಮಂಚದ ಹಾಸಿಗೆಯ ಮೇಲೆ ಮಲಗಿ, ಶರೀರವನ್ನು ಯಾವಾಗಲೂ ಅಲಂಕರಿಸಿಕೊಂಡು, ಕಷ್ಟಸುಖಗಳನ್ನರಿಯದೆ ಸುಖ ಸಂಪತ್ತಿನಿಂದ ಬಾಳುತ್ತಿದ್ದು, ಜನಕರಾಯನಲ್ಲಿ ಸೀತಾದೇವಿಯು ಮೆರೆಯುತ್ತಿದ್ದಂತೆ ತನ್ನ ತಂದೆ ತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ ಕತ್ತಲೆಯ ಹೊತ್ತಿನಲ್ಲಿ ಭೂಮಿಗೆ ಚಂದ್ರನು ಹೇಗೆ ಪ್ರಕಾಶವನ್ನು ಕೊಡುತ್ತಿರುವನೋ ಅದೇ ರೀತಿಯಲ್ಲಿ ತನ್ನ ಕುಟುಂಬಕ್ಕೆ ಸಂತೋಷವನ್ನು ಕೊಡುತ್ತಿದ್ದಳು. ಆದರೆ ಋಷ್ಯಾಶ್ರಮದಲ್ಲಿ ಶ್ರೀರಾಮನು ವಿದ್ಯಾಶಾಸ್ತ್ರಗಳನ್ನು ಕಲಿತು ದಿವ್ಯಸಂಪನ್ನರಾಗಿ ಮೆರೆಯುತ್ತಿದ್ದಂತೆ ಇರುವ ನಿಮ್ಮ ಬಾಲಕನಿಗೆ ನಮ್ಮ ಕನ್ನಿಕೆಯನ್ನು ಕೊಡಬೇಕೆಂದು ನಾವು ಉಭಯ ಕಡೆಯವರೂ ಕೂಡಿ ಜಾತಕ, ಕೂಟ ಮುಹೂರ್ತವನ್ನು ನೋಡುವಂತೆ ಬ್ರಾಹ್ಮಣರನ್ನು ಆಳುಬಿಟ್ಟು ಕರೆಯಿಸಿ, ನಮ್ಮ ನಾಲ್ಕು ಕಟ್ಟುಮನೆ ಕಯ್ಯಾಲೆ, ಬಾಡೆಯಲ್ಲಿ ಚಿನ್ನದ ಚಾಪೆ ಹಾಕಿ, ಸಣ್ಣಕ್ಕಿ ತುಂಬಿದ ತಟ್ಟೆ ಮೇಲೆ ನಂದಾದೀವಿಗೆಯನ್ನು ಇರಿಸಿ, ಜಾತಕ, ಗಣಕೂಟ ಮುಹೂರ್ತವನ್ನು ನೋಡಿದಲ್ಲು ನಮ್ಮ ಹೆಣ್ಣಿಗೂ ನಿಮ್ಮ ಗಂಡಿಗೂ ಸುಖಸಂಪನ್ನರಾಗಿ ಬಾಳುವ ಯೋಗವಿದ್ದುದರಿಂದ ನಾವುಗಳು ಬಂಧುಮಿತ್ರರಿಗೆ ಹೇಳಿ ಕಳುಹಿಸಿಯೂ ಕಾಗದ ಪತ್ರಗಳಿಂದ ಕರೆಯಿಸಿಯೂ ನಿಮ್ಮ ಭವನದಿಂದ ನಮ್ಮ ಭವನಕ್ಕೆ ದಿಬ್ಬಣಾಡಿ ಬಂದಿದ್ದೀರಿ.

ಗಂ.ಕ. : ಹೌದು.

ಹೆ.ಕ. : ಆದರೆ, ನಿಮ್ಮ ಬಾಲಕನಿಗೆ ಸಾವಿರಾರು ವರಹದ ಚಿನ್ನಾಭರಣಗಳಿಂದ ಅಲಂಕರಿಸಿ ನಮ್ಮ ಸ್ವಾಧೀನಕ್ಕೆ ಕೊಟ್ಟ ಮೇಲೆ ನಮ್ಮ ಮನೆದೇವರ ಅನುಗ್ರಹದಿಂದಲೂ, ಮಹಾನುಭಾವರಾದ ಸಭಿಕರ ಕರುಣಾಕಟಾಕ್ಷದಿಂದಲೂ ಇದೇ ಭವನದ ಮುಂದುಗಡೆಯಲ್ಲಿ ಹಾಕಿರುವ ಹನ್ನೆರಡು ಕಂಬಗಳ ಕಯ್ಯಾಲೆ ಚಪ್ಪರದ ಮೇಲ್ಕಟ್ಟಡಿಯಲ್ಲಿ ನಾವುಗಳು ಅಂದರೆ ಉಭಯ ಕಡೆಯವರು ಸಾಲುಕಟ್ಟಿ ನಿಂತು, ಕನ್ಯೆ ಕೈಧಾರೆ ವ್ರತಗಳನ್ನು ಮಾಡಿ, ನೀವು ತಂದಿರುವ ದ್ವಯಹಸ್ತಗಳನ್ನು ಚತುರ್ಹಸ್ತಗಳನ್ನಾಗಿ ಮಾಡಿರುತ್ತೇವೆ.

ಗಂ.ಕ. ಹೌದು.

[ಮುಂದುವರೆಯುವುದು]

# ಪೋಲಿಯೊ ಮಕ್ಕಳಿಗೆ ಹೇಗೆ ಬರುತ್ತದೆ ?

ಇದು ಮಕ್ಕಳನ್ನು ಪೀಡಿಸುವ ಒಂದು ಅಪಾಯಕಾರಿ ರೋಗ. ಇದಕ್ಕೆ ಬಾಲಗ್ರಹ ಎನ್ನುತ್ತೇವೆ. ವೈದ್ಯಶಾಸ್ತ್ರದಲ್ಲಿ ಇದಕ್ಕೆ ಆ್ಯಂಟೆರಿಯರ್ ಪೋಲಿಯೊ ಮೈಲೈಟಿಸ್ ಎನ್ನುವರು. ಇದು ಸಾಂಕ್ರಾಮಿಕ ರೋಗದ ರೂಪದಲ್ಲಿ ಬರುತ್ತದೆ. ಇದು ಹೆಚ್ಚಾಗಿ ಮಕ್ಕಳಿಗೆ ಬರುವ ರೋಗ. ದೊಡ್ಡವರಿಗೂ ತಗಲುವ ಸಂಭವವಿದೆ. ಪೋಲಿಯೊದಿಂದ ಅನೇಕರು ಸಾವಿಗೀಡಾಗುವರು. ಬದುಕುಳಿದವರು ಜೀವನ ಪರ್ಯಂತ ಅಂಗವಿಕಲರಾಗುವರು.

1950ರಲ್ಲಿ ಅಮೇರಿಕಾ ದೇಶವೊಂದರಲ್ಲೇ 33,344 ಜನ ಪೋಲಿಯೊ ರೋಗಕ್ಕೆ ತುತ್ತಾದರು. 1952ರಲ್ಲಿ ಪೋಲಿಯೊ ಡೆನ್ಮಾರ್ಕ, ಜರ್ಮನಿ, ಜಪಾನ, ಬೆಲ್ಜಿಯಂ, ಕೊರಿಯಾ, ಸಿಂಗಪುರ ಮತ್ತು ಭಾರತ ಈ ದೇಶಗಳಲ್ಲಿ ಸಾಂಕ್ರಾಮಿಕ ರೋಗವಾಗಿ ಹರಡಿತು. ಪೋಲಿಯೊ ಹೇಗೆ ಬರುತ್ತದೆ ಮತ್ತು ದೇಹದ ಮೇಲೆ ಅದರ ಪರಿಣಾಮಗಳೇನು ಎಂಬುದು ನಿಮಗೆ ಗೊತ್ತೆ?

ಪೋಲಿಯೊ ಒಂದು ಬಗೆಯ ವಿಷಾಣುವಿನಿಂದ ಬರುತ್ತದೆ. ಈ ವಿಷಾಣು ಗಾಳಿಯಿಂದ ನಮ್ಮ ಬಾಯಿ ಮೂಲಕ ಕರುಳನ್ನು ಸೇರಿಕೊಳ್ಳುತ್ತದೆ. ಅಲ್ಲಿಂದ ಅದು ರಕ್ತದೊಡನೆ ಸೇರಿ ನಮ್ಮ ನರಗಳಲ್ಲಿ ಪ್ರವೇಶಿಸುತ್ತವೆ. ಅದು ಕಡೆಗೆ ನಮ್ಮ ನರಮಂಡಲದ ಕೇಂದ್ರ ಭಾಗ ಮತ್ತು ಮೆದುಳಿನ ಮೇಲೆ ದಾಳಿ ಇಡುತ್ತದೆ.

ಪೋಲಿಯೊ ವಿಷಾಣು ಬೆನ್ನುಹುರಿಯ ಜೀವಕೋಶಗಳನ್ನು ನಾಶಪಡಿಸುತ್ತದೆ. ಈ ಕೋಶಗಳು ಊದಿಕೊಂಡು ಸ್ನಾಯುವಿನ ಚಲನೆಗೆ ಧಕ್ಕೆ ಉಂಟುಮಾಡುತ್ತದೆ. ಇದರ ಪರಿಣಾಮವಾಗಿ ಸ್ನಾಯುಗಳು ನಿಶ್ಚೇತಗೊಳ್ಳುತ್ತವೆ. ಪೋಲಿಯೊ ದೇಹದ ಯಾವುದೇ ಭಾಗಕ್ಕಾಗಲೀ ಹಾನಿ ಉಂಟುಮಾಡಬಹುದು.

ಪೋಲಿಯೊ ವಿಷಾಣು ರೋಗಿಯ ದೇಹವನ್ನು ಸೇರಿದಾಗ, ಅವನಿಗೆ ಸಣ್ಣಗೆ ತಲೆನೋವು ಬರುತ್ತದೆ. ಗಂಟಲು ನೋವು ಬಂದು ಜ್ವರ ಕಾಣಿಸಿಕೊಳ್ಳುತ್ತದೆ. ವಾಂತಿ ಬರುವ ಹಾಗಾಗುತ್ತದೆ. ದೇಹದಲ್ಲಿ ಕಸಿವಿಸಿ ಉಂಟಾಗುತ್ತದೆ. ರೋಗಿಗೆ ಸದಾ ನಿದ್ರೆ ಬರುವ ಹಾಗಾಗುತ್ತದೆ. ಎರಡು ಮೂರು ದಿನಗಳಲ್ಲಿ ದೇಹದ ಉಷ್ಣಾಂಶ ಏರುತ್ತದೆ. ಮೈ-ಕೈ ನೋವು ಹೆಚ್ಚುತ್ತದೆ. ಕುತ್ತಿಗೆಯಲ್ಲಿ ಬಿಗಿತ ಉಂಟಾಗಿ, ಕಡೆಗೆ ದೇಹದ ಯಾವುದಾದರೂ ಭಾಗಕ್ಕೆ ಲಕ್ವ ಹೊಡೆಯುತ್ತದೆ, ಇದಕ್ಕೆ ಪಾರ್ಶ್ವವಾಯು ಎನ್ನುವರು. ಕಾಲುಗಳಿಗೆ ಪಾರ್ಶ್ವವಾಯು ಬಡಿದರೆ, ರೋಗಿ ಓಡಾಡುವ ಸಾಮರ್ಥ್ಯ ಕಳೆದುಕೊಳ್ಳುತ್ತಾನೆ. ಪೋಲಿಯೊ ವೈರಸ್ ಬೆನ್ನು ಹುರಿಯ ಮೇಲ್ಭಾಗಕ್ಕೆ ತಗುಲಿದರೆ ರೋಗಿಗೆ ಉಸಿರಾಡುವುದೇ ಕಷ್ಟವಾಗಿ ಸಾವು ಸಂಭವಿಸಬಹುದು.

1955ರಲ್ಲಿ ಅಮೇರಿಕಾದ ಡಾ. ಜೋನಸ್ ಸಾಕ್, ಪೋಲಿಯೊ ನಿರೋಧಕ ಲಸಿಕೆಯನ್ನು ಅಭಿವೃದ್ಧಿ ಪಡಿಸಿದರು. ಕೋತಿಯ ಮೂತ್ರಕೋಶದಿಂದ ತೆಗೆದ ಪೋಲಿಯೊ ವೈರಸ್ ಅನ್ನು ಸಾಯಿಸುವ ಮೂಲಕ ಈ ಲಸಿಕೆಯನ್ನು ಅಭಿವೃದ್ಧಿ ಪಡಿಸಲಾಯಿತು. ನಿರ್ದಿಷ್ಟ ಅವಧಿಯ ಅಂತರದಲ್ಲಿ ಮೂರು ಸಲ ಈ ಲಸಿಕೆಯನ್ನು ಚುಚ್ಚಿಸಿಕೊಳ್ಳುವುದರಿಂದ ಪೋಲಿಯೊ ಸಾಂಕ್ರಾಮಿಕವನ್ನು ಪರಿಣಾಮಕಾರಿಯಾಗಿ ತಡೆಯಬಹುದು. ಅನಂತರ ಅಮೇರಿಕಾದ ಆಲ್ಬರ್ಟ್ ಸಬಿನ್ ಬಾಯಿಗೆ ಹಾಕಬಹುದಾದ ಲಸಿಕೆಯನ್ನು ಕಂಡುಹಿಡಿದರು. ತಿಂಗಳಿಗೊಮ್ಮೆಯಂತೆ ಮೂರು ಸಲ ಈ ಲಸಿಕೆಯನ್ನು ಸೇವಿಸಿದರೆ ಪೋಲಿಯೊ ವಿರುದ್ಧ ಅತ್ಯುತ್ತಮ ರಕ್ಷಣೆ ದೊರೆಯುತ್ತದೆ. ಜೀವಂತ ಇರುವ ಪೋಲಿಯೊ ವೈರಸ್‌ನ ಬಲವನ್ನು ಕುಂದಿಸುವ ಮೂಲಕ ಇದನ್ನು ಅಭಿವೃದ್ಧಿ ಪಡಿಸಲಾಯಿತು. ಈಗ್ಗೆ ಕೆಲವು ವರ್ಷಗಳ ಹಿಂದೆ ಅಮೇರಿಕಾದ ಹೆರಾಲ್ಡ್ ಕಾಕ್ಸ್ ಅಗ್ಗವಾದ ಮತ್ತೊಂದು ಪೋಲೀಯೊ ನಿರೋಧಕ ಲಸಿಕೆಯನ್ನು ಕಂಡುಹಿಡಿದರು. ಈ ಔಷಧವನ್ನು ಒಂದು ಸಲ ತೆಗೆದುಕೊಂಡರೆ ಸಾಕು. ಪೋಲಿಯೊ ರೋಗದ ವಿರುದ್ಧ ಅತ್ಯುತ್ತಮ ರಕ್ಷಣೆ ದೊರೆಯುತ್ತದೆ.

ಸಂಗ್ರಹ :
**ಪಟ್ಟಡ ನೀಶಾ,** ಮೈಸೂರು

---

## -: ಸೂಕ್ತಿ :-

ನಮ್ಮನ್ನು ಪ್ರೀತಿಸುವವರನ್ನು ಮಾತ್ರ ನಾವು ಪ್ರೀತಿಸಿದರೆ ಅದು ಅಹಿಂಸೆಯಲ್ಲ. ನಮ್ಮನ್ನು ದ್ವೇಷಿಸುವವರನ್ನು ನಾವು ಪ್ರೀತಿಸುವುದು ಅಹಿಂಸೆ.

**-ಮಹಾತ್ಮಾ ಗಾಂಧೀಜಿ**

ಸೂರ್ಯಕಾಂತಿ ಹೂ ಸೂರ್ಯನತ್ತ ಮುಖ ತಿರುಗಿಸಿ ಅರಳುವಂತೆ ಆತ್ಮವೂ ಕೂಡ ಭಗವಧಭಿಮುಖವಾಗುವುದು.

**-ಶ್ರೀ ಅರವಿಂದರು**

ಸಂಗ್ರಹ: **ಪೆಮ್ಮಟ್ಟೆ ಅರುಣ ಮುತ್ತಪ್ಪ**
ಮಾಲ್ದಾರೆ, ಸಿದ್ದಾಪುರ

# ತಲಕಾಡು ಗಂಗರ ಆಡಳಿತ

[ಹಿಂದಿನ ಸಂಚಿಕೆಯಿಂದ]

**ಹೀ**ಗೆ ತಮ್ಮ ಕಾಲವನ್ನು ಹಾಳು ಮಾಡದೆ, ಬಿಡುವಿನ ಕಾಲದಲ್ಲಿಯೂ ಸಮಾಜಕ್ಕೆ ಉತ್ತಮವಾಗುವುದಕ್ಕೆ ಸೇವೆ ಮಾಡುತ್ತಿದ್ದರು. ಈ ಕಾರಣದಿಂದ ಒಂದು ವರ್ಗ ಆಡಳಿತಕ್ಕೆ ಗಮನಹರಿಸಿದರೆ, ಮತ್ತೊಂದು ವರ್ಗವು ಅವರಿಗೆ ಸಹಾಯವಾಗಿ ವ್ಯವಸಾಯ ಕಾರ್ಯದಲ್ಲಿ ತೊಡಗಿದರು. ಈಗ ಇವರಲ್ಲಿ ಎರಡು ವರ್ಗವು ಉಂಟಾಗಿ ಒಬ್ಬರಿಗೊಬ್ಬರು ಸಹಕರಿಸಿಕೊಂಡು, ತಮ್ಮ ಆಡಳಿತವನ್ನು

ಲೇಖನ : **ಟಿ. ಆರ್. ಮುದ್ದೇಗೌಡ**

ಉತ್ತಮವಾಗಿ ನಡೆಸಿಕೊಂಡು ಬಂದಿದ್ದಾರೆ. ಅಲ್ಲದೆ ಆಡಳಿತದ ಬಹುಪಾಲು, ಬಹುಭಾಗವು ತಮಿಳುನಾಡಿನ ಪ್ರದೇಶಕ್ಕೆ ಸಂಪರ್ಕವಿದ್ದುದರಿಂದಲೂ ಮತ್ತು ಗಂಗರು ತಮಿಳುನಾಡನ್ನು ತಮ್ಮ ಅಧೀನಕ್ಕೆ ಕೆಲವು ಸಮಯ ಒಳಪಡಿಸಿಕೊಂಡಿದ್ದರಿಂದಲೂ, ತಮಿಳುನಾಡಿನ ರಾಜರುಗಳು ಗಂಗವಾಡಿ ಪ್ರದೇಶವನ್ನು ವಶಪಡಿಸಿಕೊಂಡು ಆಡಳಿತ ನಡೆಸಿದ್ದುದರಿಂದ ಗಂಗರು ತಮ್ಮ ಸಂಪ್ರದಾಯದಲ್ಲಿ ಸ್ವಲ್ಪ ಭಾಗವನ್ನು ಅನುಸರಿಸಿಕೊಂಡು ಬಂದಿದ್ದರೆಂದು, ತಮಿಳುನಾಡಿನ ರಾಜರಿಗೂ ಗಂಗರಿಗೂ ರಕ್ತಸಂಬಂಧವಿತ್ತೆಂದೂ ಅಭಿಪ್ರಾಯಪಟ್ಟಿರುವುದರಿಂದ ಗಂಗರಿಗೆ [ಬೆಳ್ಳಾಳು : ವೆಳ್ಳಾಳರಿಗೆ] ಎರಡು ದೇಶಗಳ [ಕರ್ನಾಟಕ ಮತ್ತು ತಮಿಳುನಾಡುಗಳ] ಸಂಪ್ರದಾಯಗಳೂ ಆಚರಣೆಯಲ್ಲಿ ರೂಢಿಯಲ್ಲಿತೆಂದು ತಿಳಿಯಬಹುದು. ಆದ್ದರಿಂದಲೇ ಆಗಿನ ಕಾಲದಿಂದಲೂ ಸಹ ಹೆಸರುಗಳನ್ನು ಬಳಸಿಕೊಂಡು ಆಡಳಿತ ನಡೆಸಿರುವ ಉದಾಹರಣೆಗಳಿವೆ. ಉದಾಹರಣೆಗೆ ಗಂಗರಸರುಗಳ ಕಾಲದ ಶಿಲಾಶಾಸನಗಳು ಕನ್ನಡ ಮತ್ತು ತಮಿಳಿನಲ್ಲಿ ಕರ್ನಾಟಕ ಪ್ರದೇಶ ಮತ್ತು ತಮಿಳುನಾಡು ಪ್ರದೇಶಗಳಲ್ಲೂ ದೊರೆತಿರುವುದು ಕಂಡುಬಂದಿದೆ.

ಕರ್ನಾಟಕದ ಗಂಗರಸರುಗಳ ಉಪರಾಜಧಾನಿಗಳು ಆದ ಮಣ್ಣೆ ಮತ್ತು ಮುಖ್ಯಂದ ಪಟ್ಟಣಗಳ ಆಡಳಿತ ಕಾಲದ ಶಾಸನಗಳನ್ನು ಪರಿಶೀಲಿಸಿದರೆ ತಿಳಿಯುತ್ತದೆ. ಕೆಲವು ತಮಿಳುನಲ್ಲಿಯೂ ಕೆಲವು ಕನ್ನಡದಲ್ಲಿಯೂ ಇವೆ. ಇದರಿಂದಲೇ ತಿಳಿಯುತ್ತದೆ ಗಂಗರಿಗೆ ತಮಿಳುನಾಡಿನ ಕೆಲವು ಭಾಗ ಸೇರಿತ್ತು ಎಂದು, ಆದ್ದರಿಂದ ತಲಕಾಡಿನ ಗಂಗ ಸಂತತಿಯು ತಮಿಳುನಾಡಿನಲ್ಲಿಯೂ ಆಡಳಿತ ಮಾಡಿರುವುದರಿಂದಲೂ, ರಕ್ತಸಂಬಂಧವಿರುವುದರಿಂದಲೂ ಬಾಂಧವ್ಯವಿತ್ತೆಂದು ತಿಳಿಯುವುದರಲ್ಲಿ ಸಂಶಯವಿಲ್ಲ. ಈಗಲೂ ಸಹ ತಮಿಳ್ನಾಡಿನಲ್ಲಿ ತಲಕಾಡು ಗಂಗರಸು ಸಂತತಿಯವರು ಇದ್ದರೂ ಇರಬಹುದು, ಪರಿಶೀಲಿಸಬೇಕು.

ಇತಿಹಾಸದ ಪ್ರಕಾರ ತಲಕಾಡು ಗಂಗರಸು ಸಂತತಿಗೆ ಸೇರಿದ ಪಳಿಯುಳಿಕೆಯಾದ ಗಂಗರ ಪಂಗಡಕ್ಕೆ ಸೇರಿದ ಬೆಳ್ಳಾಳು : ವೆಳ್ಳಾಳು ಪಂಗಡಕ್ಕೆ ಸೇರಿದ ಜನಸಮುದಾಯವು ಈಗಲೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವರಾಗಿರುತ್ತಾರೆ. ಈ ಜನ ಹೆಚ್ಚಿಗೆ ಬೆಳಕಿಗೆ ಬಂದಿಲ್ಲ. ಇತ್ತೀಚಿನ ಪ್ರಾಚ್ಯವಸ್ತು ಸಂಶೋಧನೆಗಳಿಂದ ಅಲ್ಲಿ ಸ್ವಲ್ಪ ವಿಚಾರಗಳು ಬೆಳಕಿಗೆ ಬರುತ್ತಿವೆ. ಇನ್ನು ಮುಂದೆ ಹೆಚ್ಚು ಹೆಚ್ಚು ಮಾಹಿತಿ ದೊರೆತು ಬೆಳಕಿಗೆ ಬರಬೇಕಾಗಿದೆ.

[ಮುಗಿಯಿತು]

# ಆಸೆಯಿಂದ ನೋವು, ನೋವಿನಿಂದ ಬದುಕಿನ ಅಂತ್ಯ

ದೂರಾ ದೂರಾ ದೂರಾ ಸಾಗಿವೆ ನೂರಾರು ಆಸೆಗಳೂ
ಹತ್ತಿರ ಬಂದು ಅಪ್ಪಿ ಮುದ್ದಾಡುತಲಿವೆ ನೂರೆಂಟು ನೋವುಗಳೂ
ಎಂದೂ ಕಾಣದು ಸಂತಸದಾ ದಿನವೂ, ಎಂದೂ ಬರಲಾರದು ಆ ಕ್ಷಣವು
ಅಲ್ಲೊಂದು ಗಳಿಗೆ ಸುಖವೆಂದು ಮುಂದಕ್ಕೆ ಹೆಜ್ಜೆಯನ್ನು ಇಡುವಾಗ ಮುಳ್ಳಿನಾ
ತಿವಿತಗಳು ನೂರಾರು ||ದೂರಾ||

ಕಣ್ಮುಚ್ಚಿಕೊಂಡರೆ ಹತ್ತಾರು ಕನಸುಗಳು
ಕಣ್ಣೆಟ್ಟು ನೋಡಲು ನೋವಿನ ಸರಮಾಲೆಗಳು
ಕಿವಿಗೊಟ್ಟು ಕೇಳಲು ನೂರಾರು ಚುಚ್ಚು ಮಾತುಗಳು
ಬಾಯ್ಬಿಟ್ಟು ನುಡಿಯಲು ಹೊರಬರದೂ ಧ್ವನಿಯೂ ||ದೂರಾ||

ಯಾವ ಕೆಲಸವ ಕೈಗೆತ್ತಿಕೊಳ್ಳಲು, ಯಾವ ಪ್ರಯತ್ನವ ಪಡಲೂ
ಯಾವ ಆಸೆಯೂ ಈಡೇರದಿರಲು, ಕಂಡ ಕನಸು ನನಸಾಗದಿರಲು
ನಿಂತ ಹೆಜ್ಜೆಯನು ಕಿತ್ತು ತೆಗೆಯಲಾಗದಿರಲು...
ನೊಂದೂ ನೊಂದೂ ಸೊರಗಿ ಹೋಗಿವೆ ಈ ಬಾಳು–ಬಹುಗೋಳು ||ದೂರಾ||

ಯಾರೂ ಕಾಣರು ಯಾರೂ ಕೇಳರು ಏನಾಯಿತೆಂದು
ಸಹಾಯ ಕೇಳಲು ನಗುತಿಹರು ನೋಡಿ ಚಪ್ಪಾಳೆ ತಟ್ಟಿ
ಸೊರಗಿ ಕೊರಗಿ ಚಡಪಡಿಸುತ್ತಿರಲು ಆ ದೇವ ಕಣ್ಣೆಟ್ಟು ನೋಡನು
ಅಷ್ಟದಿಕ್ಕುಗಳಿರಲು ಈ ಭೂಮಿಗೆ ಏಕ ದಿಕ್ಕೂ ಕಾಣದು ನೊಂದ ಬಾಳಿಗೆ||ದೂರಾ||

ಈಗಲ್ಲ ಆಗ, ಇಂದಲ್ಲ ನಾಳೆ ಎಂದು ಕಾಯುತಲಿರಲು
ಒಂದು ಕ್ಷಣವೂ ಹೂವಾಗಿ ಬರದೂ ಈ ಬಾಳಿನಲ್ಲಿ
ಬಾಳಿನಾ ಜ್ಯೋತಿ ನಂದಿ ಹೋಗಿದೆ, ಕತ್ತಲಾಗಿದೆ ಬದುಕಲಿ
ದಾರಿ ಕಾಣದು ಮುಂದೆ ಸಾಗಲು ಕೂಗಿಕೊಳ್ಳಲು ಓಡಿಬರುತಿವೆ ಬಾಳ ದೈವಗಳೂ
ಬಹುಗೋಳು ಈ ಬಾಳು ||ದೂರಾ||

○ **ಉರುಂಡೆ ರುಕ್ಮಿಣಿ**, ಅಮ್ಮಂದೂರು

# ಅಮೀರ್ ಜಾನ್‌ನಿಂದ ಸುಬ್ರಮಣ್ಯ ದೇವಸ್ಥಾನದ ನಿರ್ಮಾಣ

ಮಂಡ್ಯ ಜಿಲ್ಲೆ, ಮಹದೇವಪುರ ಗ್ರಾಮದ ಹುಸೇನ್ ಸಾಬರ ಮಗ ಅಮೀರ್ ಜಾನ್‌ನಿಂದ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ ಸ್ಥಾಪನೆಯು ದಿನಾಂಕ 4-12-1997ರಲ್ಲಿ ಊರಿನ ಪ್ರಮುಖರ ಸಮ್ಮುಖದಲ್ಲಿ ನಡೆಯಿತೆಂದು ಊರಿನ ಗೌಡರಾದ ಶ್ರಿ ಸಿದ್ದೇಗೌಡ ತಿಳಿಸಿದ್ದಾರೆ.

ಇಲ್ಲಿ ವಾಸವಾಗಿರುವ ಅಮೀರ್ ಜಾನ್ ಒಬ್ಬ ಬಡ ಗುಜರಿ ವ್ಯಾಪಾರಿ. ತಾಯಿ ಅಸ್ಮತ್‌ಬೀ. ಸುಮಾರು 3 ವರ್ಷಗಳಿಂದ ಇವರ ಮನೆಯೊಳಗೆ ಹುತ್ತವನ್ನು ತೆಗೆಯುತ್ತಾ ಹೋದಂತೆ ಬೆಳೆಯುತ್ತಲೇ ಬರುತ್ತಿತ್ತಂತೆ, ಬರಬರುತ್ತಾ ಅಮೀರ್‌ಜಾನ್‌ನ ತಾಯಿಗೆ ಸ್ವಲ್ಪ ಭಯಭಕ್ತಿ ಬಂದಂತಾಯಿತು. ಅವಳು ಊರಿನ ಸಿದ್ದೇಗೌಡರಲ್ಲಿ ಪ್ರಸ್ತಾಪಿಸಿದಾಗ ಜೋತಿಷ್ಯಗಳ ಬಳಿಗೆ ಹೋಗಲು ತಿಳಿಸಿದರು. ಶಾಕೀರ್ ಅನ್ನುವ ಮಹಿಳಾ ಗುರುವನ್ನು ತಾಯಿ ಅಸ್ಮತ್ ಭೀ ಸಂಪರ್ಕಿಸಿದಾಗ ಇಕ್ಬಾಲ್ ಷರೀಪ್ ರೆನ್ನುವ ಗುರುವು ಕುಕ್ಕೆ ಸುಬ್ರಮಣ್ಯಕ್ಕೆ ಕರೆದೊಯ್ದರು. ಅಲ್ಲಿನ ಪರಿಸರ ವಾತವರಣ ಇವರಿಗೆ ತುಂಬಾ ಹಿಡಿಸಿ ಮೆಚ್ಚುಗೆಯಾಯಿತು. ತಾಯಿ ಅಸ್ಮತ್‌ಭೀ ಗೆ ದೈವ ಪ್ರೇರಣೆಯಾಗಿ ಶ್ರೀದೈವವನ್ನು ಪೂಜಿಸುವ ನಿರ್ಧಾರಕ್ಕೆ ಬಂದರು. ಮೊಕ್ತೇಶ್ವರರಿಂದ ಸುಬ್ರಮಣ್ಯನ ಮಹಿಮೆಯು ತಿಳಿಯಲ್ಪಟ್ಟಿತು. ಹೆಚ್ಚಿದ ಭಕ್ತಿಯಿಂದಾಗಿ ಪ್ರತಿ ಶುಕ್ರವಾರ ಪೂಜೆ ಮಾಡುವ ಪರಿಪಾಠ ಇಟ್ಟುಕೊಂಡರು. ಹೀಗೆಯೆ 3 ವರ್ಷಗಳು ಸಂದವು. ಅಂತೆಯೇ ದೇವಸ್ಥಾನ ಕಟ್ಟುವ ನಿರ್ಧಾರಕ್ಕೆ ಬಂದು ಚಿಕ್ಕ ದೇವಸ್ಥಾನ ಕಟ್ಟಿಸಿದರು. ಇಲ್ಲಿ ಸುಮಾರು ಒಂದುವರೆ ಅಡಿ ಎತ್ತರದ ಶಿವಲಿಂಗಕ್ಕೆ ಏಳು ತಲೆಯ ಹೆಡೆ ಎತ್ತಿದ ಸರ್ಪ [ಶಿಲೆಯಲ್ಲಿ ಮಾಡಿದ ವಿಗ್ರಹ], ಎದುರಿಗೆ ಬಸವನ ವಿಗ್ರಹವು ಹಾಗೂ ಪಾದುಕೆಗಳಿವೆ.

ಅಮೀರ್ ಜಾನ್‌ನ ತಮ್ಮ ಅಹ್ಮದ್ ಜಾನ್‌ನಿಗೆ 22ವರ್ಷ. ಈತ P.U.C. ಓದಿದ್ದಾನೆ. ಈತನ ಕಣ್ಣಿಗೆ ಹೋದಲ್ಲೆಲ್ಲಾ ಏಳು ಹೆಡೆಯ ಸರ್ಪವು ಕಾಣಿಸುತ್ತಿತ್ತು. ಸುಮಾರು 2 ವರ್ಷಗಳಿಂದಲೂ ಹೀಗೆ ಈತನಿಗೆ ಕನಸಿನಲ್ಲಿ ಪ್ರತಿನಿತ್ಯ ಹಾವಿನ ರೂಪದಲ್ಲಿ ಬಂದು ಸನ್ನೆ ಮೂಲಕ ಕೈಗೆ ಬೀಗದಕೈ ಗೊಂಚಲನ್ನು ಕೊಟ್ಟು ಧರ್ಮಸ್ಥಳ, ಶ್ರಿರಂಗಪಟ್ಟಣದ ರಂಗನಾಥ ದೇವಸ್ಥಾನ, ಮಹಾದೇವಪುರದ ಕಾಶೀ ವಿಶ್ವನಾಥ, ತಲಕಾಡಿನ ಪಂಚಲಿಂಗೇಶ್ವರನ ದರ್ಶನ, ಸಿದ್ದಲಿಂಗಪುರದ ಸಿದ್ಧೇಶ್ವರ ದೇವಸ್ಥಾನ ಮತ್ತು ಪಾಂಡವಪುರ ತಾ|| ಶ್ರೀರಾಮಪುರದ ಬಾಬ ಪಕ್ರಿದ್ದಿನ್ ಔಲಾದ ಷರೀಪ್ ಇಲ್ಲಿಗೆಲ್ಲ ಕರೆದೊಯ್ದು ಬಾಗಿಲು ತೆಗೆಯಿಸಿ ದೇವರ ದರ್ಶನ ಮಾಡಿಸುತ್ತಿತ್ತಂತೆ. ಹೀಗಿರುವಾಗಲೆಲ್ಲಾ ತನಗೆ ಸ್ಥಾನ [ನೆಲೆ] ಕೇಳುತ್ತಿತ್ತಂತೆ.

ಪೂಜಾ ಕಾರ್ಯಕ್ರಮದ ಅಂತ್ಯದಲ್ಲಿ ಅಹ್ಮದ್ ಜಾನ್‌ಗೆ ಸುಬ್ರಮಣ್ಯ ದೈವ ವೈವಶವಾಗಿ "ನಾನು ಶ್ರೀ ಸುಬ್ರಮಣ್ಯ ಸ್ವಾಮಿ ದೇವರು, ನನಗೆ ಇಲ್ಲಿ ಪ್ರತಿನಿತ್ಯ ಹಿಂದೂ ಸಂಸ್ಕೃತಿ ಪ್ರಕಾರ ಪೂಜೆ ಪುರಸ್ಕಾರಗಳು ನಡೆಯಬೇಕು. ಪ್ರತಿ ಕಾರ್ತಿಕದಲ್ಲಿ ನನ್ನನ್ನು ಪ್ರೀತಿಯಿಂದ ಪೂಜಿಸಿದರೆ ಸರ್ವ ಭಕ್ತರಿಗೆ ಕ್ಷೇಮವೆಂದು ಆಣತಿಯಿತ್ತಿತ್ತಂತೆ. ತಾಯಿ ಅಸ್ಮತ್ ಭೀ ಪರಮಭಕ್ತೆಯಾಗಿ ಸುಮಾರು 3 ತಿಂಗಳುಗಳಿಂದ ಈ ಸಂಸಾರದಲ್ಲಿ ಮಾಂಸಭಕ್ಷಣೆಯಿಲ್ಲದೆ ಸಸ್ಯಹಾರಿತನದಿಂದ ಶುದ್ಧ ಮುದ್ರಿಕೆಯಲ್ಲಿಸುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ.

1990ರ ಹಿಂದೂ ಮುಸ್ಲಿಂ ಗಲಾಟೆ ಸಂದರ್ಭದಲ್ಲಿ ಇಲ್ಲಿದ್ದ 50 ಸಂಸಾರಗಳು ಕಾಲುಕಿತ್ತಾಗ ಉಳಿದ 5 ಸಂಸಾರಗಳಲ್ಲಿ ಇವರದು ಒಂದು. ಈತ ಬಹಳ ಬಡವನಾಗಿದ್ದರೂ ಸಹ 13,000 ರೂ. ಖರ್ಚು ಮಾಡಿ ಈ ಪುಟ್ಟ ದೇವಸ್ಥಾನ ಕಟ್ಟಿದ್ದು ನೋಡಿ ಊರಿನ ಜನರು ಬೆಕ್ಕಸಬೆರಗಾಗಿದ್ದಾರೆ. ಇಂದಿನ ಈ ಕಲುಷಿತ ವಾತಾವರಣದಲ್ಲಿ ಐಕ್ಯತೆಗೊಂದು ಉತ್ತಮ ಮಾದರಿ.

ಮಹದೇವಪುರ ಗ್ರಾಮವು ಕಾವೇರಿ ತೀರದ ಉತ್ತಮ ಪ್ರೇಕ್ಷಣೀಯ ಸ್ಥಳವು, ಸಿನಿಮಾ ಜಗತ್ತಿನ ಶೂಟಿಂಗ್ ದಾಮವೂ ಆಗಿದ್ದು, ಮೈಸೂರಿನಿಂದ ಕೇವಲ 16 ಕಿ.ಮೀ. ಗಳ ಅಂತರದಲ್ಲಿದ್ದು, ಉತ್ತಮ ಖಾಸಗಿ ಬಸ್ಸಿನ ವ್ಯವಸ್ಥೆಯಿದೆ. ಈ ಮೇಲಿನ ವಿವರವನ್ನು "ಕೊಡಗು ಸಂಗಾತಿ" ಕಣ್ಣಾರೆ ಕಂಡು ಪರಾಂಬರಿಸಿದೆ.

ವರದಿ : **ಪಟ್ಟೆಡ ಪ್ರಭಾಕರ್**

## ಸಂಗಾತಿ ವಿವಾಹ ವೇದಿಕೆ

**23 ವರ್ಷದ 5.5" ಎತ್ತರದ ಪಿ.ಯು.ಸಿ. ಓದಿರುವ, ಮನೆಗೆಲ್ಸ, ಕಷ್ಟ ಸಹಿಷ್ಣುತೆಗಳ ಅನುಭವವಿರುವ ಸುಂದರ ಗೌಡ ಹುಡುಗಿಗೆ, ಗೌಡ ಜನಾಂಗದ ಆಚಾರ/ವಿಚಾರವಂತ ಹುಡುಗ [ವರ] ಬೇಕಾಗಿದ್ದಾರೆ. ಆಸಕ್ತರು ಕೆಳಗಿನ ವಿಳಾಸಕ್ಕೆ ಸಂಪರ್ಕಿಸಿ,**

**ಪಿ ಬಿ. ನಂ. 2,**
**C/o ಕೊಡಗು ಸಂಗಾತಿ**

## 2 ಮತ್ತು 7ನೇ ಅಖಿಲ ಭಾರತ ಕರಾಟೆ ಚಾಂಪಿಯನ್‌ಷಿಪ್‌ನಲ್ಲಿ ನಮ್ಮ ಮಕ್ಕಳ ಸಾಧನೆ

**ತ**ಡಿಯಪ್ಪನ ಭವ್ಯ ಕುಮಾರ್‌ಜಯ ಮತ್ತು ಕಿಶೋರ್ ಕುಮಾರ್‌ಜಯ 1997ರ ನವಂಬರ್ 22 ಮತ್ತು 23 ರಂದು ಕೇರಳದ ಕಣ್ಣಾನೂರಿನಲ್ಲಿ ನಡೆದ 7ನೇ ಅಖಿಲಭಾರತ ಕರಾಟೆ–ಡೂ ಚಾಂಪಿಯನ್‌ಷಿಪ್‌ನಲ್ಲಿ 46–50 ಕೆ.ಜಿ. ವಿಭಾಗದಲ್ಲಿ ಮೊದಲ ಸ್ಥಾನವನ್ನು ತಡಿಯಪ್ಪನ ಭವ್ಯಕುಮಾರ್‌ಜಯ ತನ್ನದಾಗಿರಿಸಿಕೊಂಡಿದ್ದಾಳೆ.

ಇವಳು ಇದೇ ಡಿಸೆಂಬರ್ 20–21 ರಂದು ಕ್ಯಾಲಿಕಟ್‌ನಲ್ಲಿ ನಡೆದ 2ನೇ ಅಖಿಲ ಭಾರತ ಸೈಬೂಕನ್ ಕರಾಟೆ ಚಾಂಪಿಯಯನ್‌ಷಿಪ್‌ನಲ್ಲಿ [ಕತಾದಲ್ಲಿ] ಮೊದಲನೇ ಹಾಗೂ ಕುಮಿಟೆಯಲ್ಲಿ ಎರಡನೇ ಸ್ಥಾನ ಗಿಟ್ಟಿಸಿಕೊಂಡಿದ್ದಾಳೆ. ಇವಳ ಸಹೋದರ ಕಿಶೋರ್ ಕುಮಾರ್‌ಜಯ ಸಹ 1997 ಡಿಸೆಂಬರ್ 20–21 ರಂದು ಕ್ಯಾಲಿಕಟ್‌ನಲ್ಲಿ ನಡೆದ 2ನೇ ಅಖಿಲಭಾರತ ಸೈಬೂಕನ್ ಕರಾಟೆ ಚಾಂಪಿಯನ್‌ಷಿಪ್‌ನಲ್ಲಿ 30–35 ಕೆ.ಜಿ. ವಿಭಾಗದ ಕುಮಿಟೆಯಲ್ಲಿ ಮೂರನೇ ಸ್ಥಾನಗಳಿಸಿದ್ದಾನೆ.



ತಡಿಯಪ್ಪನ ಕಿಶೋರ್ ಮತ್ತು ಭವ್ಯ

ಇವರು ತಡಿಯಪ್ಪನ ಕುಮಾರ್‌ಜಯ ಪದ್ಮಾವತಿ ದಂಪತಿಗಳ ಮಕ್ಕಳು. ಇವರು ಮೈಸೂರಿನ ಕಾವೇರಿ ಸ್ಕೂಲ್‌ನಲ್ಲಿ ಕ್ರಮವಾಗಿ 9ನೇ ಮತ್ತು 8ನೇ ತರಗತಿಯ ವಿದ್ಯಾರ್ಥಿಗಳಾಗಿದ್ದಾರೆ. ಭವ್ಯ ರಾಜ್ಯ ಮಟ್ಟದ ಅರೋಬಿಕ್ ವ್ಯಾಯಾಮ, ಡ್ರಾಯಿಂಗ್ ಸ್ಪರ್ಧೆಯಲ್ಲಿ ಹಲವು ಉತ್ತಮ ಸಾಧನೆಗೈದು ಪ್ರಶಸ್ತಿಗಳನ್ನು ತನ್ನದಾಗಿರಿಸಿಕೊಂಡಿರುವಳು. ಇವರಿಗೆ ಸಂಗಾತಿ ಬಳಗ ಉಜ್ವಲ ಭವಿಷ್ಯವನ್ನು ಕೋರುತ್ತದೆ.

---

## ಕೊಡಗು ಸಂಗಾತಿ ಪ್ರಥಮ ವರ್ಷದ ಯುಗಾದಿಯ ವಿಶೇಶಾಂಕ – 1998

ಮಾನ್ಯರೆ,

ಕೊಡಗು ಸಂಗಾತಿ ತನ್ನ ಪ್ರಥಮ ವರ್ಷದ ಹುಟ್ಟು ಹಬ್ಬದ ಸಂದರ್ಭದಲ್ಲಿ ವಿಶೇಷ ಸಂಚಿಕೆಯನ್ನು ಹೊರ ತರಲು ಇಚ್ಚಿಸಿದೆ.

ಕರ್ನಾಟಕದಾದ್ಯಂತ ಗೌಡ ಜನಾಂಗದ ಮನೆಮಾತಾಗಿ, ಓದುಗರ ಮನಗೆದ್ದು, ಸ್ವಂತಿಕೆಯಿಂದ ಮುನ್ನಡೆದಿರುವ ಕೊಡಗು ಸಂಗಾತಿ ಪತ್ರಿಕೆ ಜನಾಂಗದವರ ಜಾಹೀರಾತುಗಳ ಪ್ರಕಟಣೆಗೆ ಉತ್ತಮ ಮಾಧ್ಯಮವಾಗಿದೆ.

ಕೊಡಗು ಸಂಗಾತಿ ಹೊರತರುತ್ತಿರುವ ಈ ವಿಶೇಷ ಸಂಚಿಕೆ ಕಥೆ, ಸಾಹಿತ್ಯಿಕ, ವೈಚಾರಿಕ, ಹಾಸ್ಯಲೇಖನ, ವಿಡಂಬನೆಗಳನ್ನೊಳಗೊಂಡಿರುವುದಲ್ಲದೆ, ಹಿರಿಕಿರಿಯರೆಲ್ಲರಿಗೂ ಪ್ರೋತ್ಸಾಹಿಸುತ್ತಿರುವ ಪತ್ರಿಕೆ ಇದಾಗಿದೆ.

1998ರ ಏಪ್ರಿಲ್ ಮೊದಲ ವಾರದಲ್ಲೇ ಸುಂದರ ಮುದ್ರಣದೊಂದಿಗೆ ಕ್ರೌನ್ ಆಕಾರದಲ್ಲಿ ಹೊರಬರಲಿರುವ ಈ ಸಂಚಿಕೆಗೆ ತಮ್ಮ ಸಂಸ್ಥೆಯ ಹಾಗೂ ತಮ್ಮ ವೈಯಕ್ತಿಕವಾದ ಶುಭಾಶಯ ಕೋರುವ ಜಾಹೀರಾತುಗಳನ್ನು ನೀಡಿ, ಈ ಕೊಡಗು ಸಂಗಾತಿ ಪತ್ರಿಕೆ ಬೆಳೆಯಲು ಪ್ರೋತ್ಸಾಹಿಸಬೇಕಾಗಿ ನಮ್ರ ವಿನಂತಿ.

| | | | |
|---|---|---|---|
| **ಜಾಹೀರಾತಿನ ವಿವರ :–** | **ಹೊರ ಪುಟಗಳಿಗೆ** | **ರೂ** | **3000–00** |
| | **ಒಳ ಒಂದು ಪುಟಕ್ಕೆ** | **ರೂ** | **2000–00** |
| | **ಅರ್ಧ ಪುಟಕ್ಕೆ** | **ರೂ** | **1000–00** |
| | **ಕಾಲು ಪುಟಕ್ಕೆ** | **ರೂ** | **500–00** |

**ಲೇಖನಗಳನ್ನು ಹಾಗೂ ಜಾಹೀರಾತುಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 31–1–1998**

**ವಂದನೆಗಳೊಂದಿಗೆ,**

**– ಸಂಪಾದಕ**

# ಸ್ಮರಣೆ : ಗಜರಾಜ ದಸರಾ ಅಂಬಾರಿ ದ್ರೋಣ ಇನ್ನಿಲ್ಲ

**ವಿ**ಶ್ವ ವಿಖ್ಯಾತ ಮೈಸೂರು ದಸರಾದಲ್ಲಿ 18 ಬಾರಿ ಚಿನ್ನದ ಅಂಬಾರಿಯನ್ನು ಹೊತ್ತು ಕೀರ್ತಿಗೆ ಪಾತ್ರನಾಗಿ ದಸರ ವೀಕ್ಷಕರ ಕಣ್ಮಣಿಯಾಗಿದ್ದ 63 ವರ್ಷದ ದ್ರೋಣ ಇನ್ನಿಲ್ಲ.

ಕಾಕನಕೋಟೆ ಅರಣ್ಯದ ಬಳ್ಳಿಕ್ಯಾಂಪಿನಲ್ಲಿ ದಿ. 10-12-1997ರ ಬೆಳಿಗ್ಗಿನ ಝಾವದಲ್ಲಿ ದಾರುಣ ರೀತಿಯಲ್ಲಿ ಸಾವಿಗೀಡಾದ ರೀತಿ ನಿಜಕ್ಕೂ ಶೋಚನೀಯ ಮತ್ತು ಖಂಡನೀಯ ಸಂಗತಿ. ಹೈಟೆನ್ಸನ್ ವೈರ್‌ಗೆ ಮರದ ಕೊಂಬೆಯೊಂದು ತಗುಲಿದ ಫಲವಾಗಿ ವಿದ್ಯುತ್ ಪ್ರವಾಹಕ್ಕೆ ಸಿಕ್ಕಿದ ದ್ರೋಣ ಸ್ಥಳದಲ್ಲೆ ಘೋರ ಸಾವನ್ನಪ್ಪಿದ. ರಾತ್ರಿ ಸಮಯ ಕ್ಯಾಂಪಿನಿಂದ ಅರಣ್ಯಕ್ಕೆ ಆನೆಗಳನ್ನು ಆಹಾರಕ್ಕಾಗಿ ಮೇಯಲು ಬಿಡುವುದು, ಬೆಳಿಗ್ಗೆ ಹೋಗಿ ವಾಪಸ್ಸು ಕರೆತರುವುದು ದಿನನಿತ್ಯದ ಪರಿಪಾಠ. ಆನೆಗಳು ಮುಕ್ತವಾಗಿ ಕಾಡಿನಲ್ಲಿ ಸುಖಿಸಿ ನಲಿಯುವುದರಿಂದ ಒಂದು ರೀತಿ ಆನಂದವನ್ನು ಅವು ಪಡೆಯುತ್ತಿದ್ದವು. ಕೇರಳದಿಂದ ಕರ್ನಾಟಕಕ್ಕೆ ವಿದ್ಯುತ್ ಸರಬರಾಜು ಆಗುತ್ತಿದ್ದುದ ಈ ತಂತಿಗಳ ಮೂಲಕವೆ.

1971ರಲ್ಲಿ ಕಾಕನಕೋಟೆ ಅರಣ್ಯದಲ್ಲಿ ಖೆಡ್ಡಾ ಮೂಲಕ ಈತನನ್ನು ಹಿಡಿಯಲಾಯಿತು. ದ್ರೋಣನ ಗಾಂಭೀರ್ಯ, ವಿಶ್ವಾಸಾರ್ಹತೆಗಳಿಗಾಗಿ 750 ಕೆ.ಜಿ. ತೂಕದ ಚಿನ್ನದಅಂಬಾರಿಯನ್ನು ಹೊರಲು ದಸರಾದಲ್ಲಿ ಬಳಸಿಕೊಳ್ಳಲಾಯಿತು. ಈ ಕೆಲಸವನ್ನು ಶಿಸ್ತಿನ ಸಿಪಾಯಿಯಂತೆ ನಿಯುತ್ತಿನಿಂದ ಪ್ರತಿ ವರ್ಷವು ದ್ರೋಣ ನಿರ್ವಹಿಸುತ್ತಿದ್ದ. ವೃಧ್ಧಾಪ್ಯವಿದ್ದರು ದ್ರೋಣನೆ ಈ ಕೆಲಸ ಮಾಡುತ್ತಿದ್ದ. ಅರ್ಜುನ, ಭೀಮ ಯಾರು ಈ ಹಂತಕ್ಕೆ ಬಂದಿರುವುದಿಲ್ಲ. ಅವರಿಗೆ ಹೆಚ್ಚು ಅಭ್ಯಾಸವಿಲ್ಲದ ಈ ಹಿನ್ನೆಲೆಯಲ್ಲಿ ಮುಂದಿನ ದಸರದಲ್ಲಿ ಹೆಮ್ಮೆಯ ಅಂಬಾರಿ ಹೊರುವವರಾರು ಎಂಬುದೇ ಒಂದು ಪ್ರಶ್ನೆಯಾಗಿದೆ.

ಕಾಡಿನ ಆಗು ಹೋಗುಗಳಿಗೆ ಸಂಬಂಧಿಸಿದಂತೆ ಎಲ್ಲಾ ವಿಷಯಗಳನ್ನರಿತ ಸಿಬ್ಬಂದಿಯವರ ಉದಾಸೀನತೆಯೇ ಈ ಅನಾಹುತಕ್ಕೆ ಕಾರಣವಾಗುವ ಮೊದಲೇ ಎಚ್ಚರಗೊಳ್ಳದ ಈ ಮೂಕ ಪ್ರಾಣಿಗಳ ಪಾಲಕರು ಮುಂಜಾಗ್ರತೆ ಕ್ರಮವಹಿಸಿದ್ದೆ ಆಗಿದ್ದಿದ್ದರೆ ಇಂತಹ ಬಾರಿ ಅನಾಹುತ ತಪ್ಪಿಸಬಹುದಿತ್ತೇನೊ. ಇನ್ನು ಮುಂದಾದರು ಈ ತರಹದ ಅನಾಹುತ ಆಗದಿರಲೆಂಬುದು ಎಲ್ಲರ ಹಾರೈಕೆಯಾಗಿದೆ.



**ದ್ರೋಣ**

ಮನುಷ್ಯನಿಗಿಂತ ನಿಯತ್ತಾಗಿ ದುಡಿದ ಗಜರಾಜ ದ್ರೋಣನ ಸರ್ವೋಚ್ಚ ಕಾರ್ಯಕ್ಕಾಗಿ ಪದ್ಮಶ್ರೀಯಂತಹ ಪ್ರಶಸ್ತಿಯನ್ನು ಕೊಟ್ಟು ಕಲ್ಲಿನ/ಕಂಚಿನ ಪುತ್ಥಳಿಯನ್ನು ಮೈಸೂರು ಅರಮನೆಯ ಉದ್ಯಾನವನದಲ್ಲಿ ನಿರ್ಮಿಸಿದಾಗ ದ್ರೋಣನ ನೆನಪು ಜನರ ಮನದಲ್ಲಿ ಸದಾ ಉಳಿಯುವಂತೆ ಮಾಡುವುದು ದ್ರೋಣನಿಗೆ ಸಲ್ಲತಕ್ಕ ಗೌರವವಲ್ಲವೆ ?

● ಪಟ್ಟಡ ಪ್ರಭಾಕರ್

---

## ನಗೆ ಹನಿಗಳು

ಪತಿ : ನನ್ನ ಹೊಸ ಪ್ಯಾಂಟು ಶರಟಿಗೆ ಇದೇನು ಗತಿ ಬಂತು ? ಯಾವ ಕೆಟ್ಟ ಸೋಪಿನಿಂದ ಒಗೆದೆ ? ನನ್ನ ಬಟ್ಟೆ ಕುಗ್ಗಿ ಹೋಗಿದೆ

ಪತ್ನಿ : ಯಾವ ಸೋಪಿನಲ್ಲಿ ನಿಮ್ಮಬಟ್ಟೆ ಒಗೆದೆನೋ ಅದರಲ್ಲಿ ಸ್ನಾನ ಮಾಡಿ ಆಗ ನಿಮ್ಮ ಎತ್ತರವೂ ಕುಗ್ಗಿ ಪ್ಯಾಂಟು ಶರಟು ಸರಿ ಹೋಗುತ್ತದೆ.

### ಜಗಳ

ದುಂದುವೆಚ್ಚದ ವಿಷಯವಾಗಿ ದಂಪತಿಗಳ ನಡುವೆ ಜಗಳ ನಡೆಯುತ್ತಿತ್ತು.

ಪತಿ : ನನ್ನದು ಹೆಚ್ಚು ಖರ್ಚು ಅಂತಿಯಲ್ಲ, ವರ್ಷಕ್ಕೆ ನೀನು 2 ಕಿಲೋ ಲಿಪ್ ಸ್ಟಿಕ್ ತಿನ್ನುವುದಿಲ್ಲವೇ

ಪತ್ನಿ : ಅದರಲ್ಲಿ ಅರ್ಧ ನಿಮ್ಮ ಹೊಟ್ಟೆಗೆ ಹೋಗುತ್ತಲ್ಲ ?

### ಹೇಗೆ ಗೊತ್ತು?

ತಾರ : ರೀ ಮಾಲಾ ! ನಿಮ್ಮೆಜಮಾನರು ಪ್ರತಿದಿನ ಬಾರಿನಲ್ಲಿ ಕಾಲ ಕಳೆಯುತ್ತಿದ್ದಾರಂತಲ್ಲ ?

ಮಾಲಾ :ಹೌದೇ! ನಿಮಗೆ ಹೇಗೆ ಗೊತ್ತು?

ತಾರ : ನಮ್ಮೆಜಮಾನರಿಗೆ "ಬಾರ್‌ನಲ್ಲಿ" ದಿನ ಕಾಣಿಸುತ್ತಾರಂತೆ.

**ಕೊಂಬರನ ಎಂ. ಗಣೇಶ**
ಮೇಕೇರಿ

# ಬೆಂಗಳೂರಿನಲ್ಲಿ ಅರೆಭಾಷೆ ಗೌಡರ ಹಿರಿಮೆ

ನಮ್ಮ ಅರೆಭಾಷೆಯ ಗೌಡರುಗಳು ಮುಂದಿನ ಜೀವನದ ಅಭಿವೃದ್ಧಿಗೋಸ್ಕರ ಈಗ್ಗೆ ಸುಮಾರು 40 ವರ್ಷಗಳಿಂದೀಚೆಗೆ ಕರ್ನಾಟಕ ರಾಜ್ಯದ ಬೆಂಗಳೂರು ನಗರದ ಸುಮಾರು 100 ಕಿ.ಮೀ. ವಿಸ್ತೀರ್ಣದಲ್ಲಿ ನೆಲೆಸಿ ಜೀವನವನ್ನು ಸಾಗಿಸುತ್ತಿದ್ದಾರೆ. ಅವರಲ್ಲಿ ಹೆಚ್ಚಿನವರು ಸ್ವಂತ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಇನ್ನೂ ಕೆಲವರು ಬಾಡಿಗೆ ಮನೆಗಳಲ್ಲಿ ಇದ್ದಾರೆ. ಇನ್ನೂ ಕೆಲವರು ಬಾಡಿಗೆ ಮನೆಗಳನ್ನು ಕಟ್ಟಿಸಿ ಅದರಲ್ಲಿ ಬರುವ ಬಾಡಿಗೆ ಹಣದಿಂದ ಜೀವನ ಸಾಗಿಸುತ್ತಾ ಇರುವರು. ಮತ್ತೆ ಕೆಲವರು ವ್ಯಾಪಾರಿಗಳಾಗಿರುವರು. ಹಲವರ್ು ಕರ್ನಾಟಕ ರಾಜ್ಯ ಸರ್ಕಾರದ ಕಾರ್ಖಾನೆಯಲ್ಲಿ ಸೇವೆ ಸಲ್ಲಿಸುತ್ತಿದ್ದರೆ, ಉಳಿದವರು ಖಾಸಗಿ ಕಾರ್ಖಾನೆಯಲ್ಲಿ ಸೇವೆ ಸಲ್ಲಿಸುತ್ತಿರುವರು ಹೀಗೆ ನಮ್ಮ ಕೊಡಗಿನ ಅರೆಭಾಷೆಯ ಗೌಡರುಗಳು ನಾನಾ ಬಗೆಯ ವೃತ್ತಿಯಲ್ಲಿ ತೊಡಗಿ ಜೀವನ ಸಾಗಿಸುತ್ತಿದ್ದಾರೆ.

ಬೆಂಗಳೂರು ನಗರದಲ್ಲಿ ನಮ್ಮ ಅರೆಭಾಷೆ ಗೌಡರುಗಳ ಸಂಖ್ಯೆ ದಿನೇ ದಿನೇ ಹೆಚ್ಚಿನ ಸಂಖ್ಯೆಯಲ್ಲಿ ಹೆಚ್ಚುತ್ತಿರುವುದು ಸರ್ವೆಸಾಮಾನ್ಯವಾಗಿದೆ. ಹುಟ್ಟೂರಿನಿಂದ ಹಿಡಿದು ಇಡೀ ಭರತಖಂಡದಲ್ಲೂ, ಹೊರಗಿನ ದೇಶದಲ್ಲೂ ಚದುರಿರುವ ನಮ್ಮ ಅರೆಭಾಷೆ ಗೌಡರುಗಳ ಸಂಖ್ಯೆಯನ್ನು ಕಂಡು ಹಿಡಿಯುವುದು ಸಹ ಬಹಳ ಪ್ರಯಾಸದ ಕೆಲಸವಾಗಿದೆ. ನಮ್ಮ ಗೌಡರುಗಳು ಈಗಿನ ಕಾಲದ ಅಂದಾಜಿನ ಪ್ರಕಾರ ವರ್ಷಂಪ್ರತಿ 300 ರಿಂದ 500ರವರೆಗೆ ಹುಟ್ಟೂರಿನಿಂದ ಬೆಂಗಳೂರು ನಗರಕ್ಕೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿಯೂ, ಉನ್ನತ ಸರ್ಕಾರಿ ನೌಕರಿಗಾಗಿಯೂ, ವ್ಯಾಪಾರದ ದೃಷ್ಟಿಯಿಂದಲೂ ಬರುತ್ತಿರುತ್ತಾರೆ. ಅಂತೆಯೇ ಮುಂದಿನ ನಮ್ಮ ಜನಾಂಗದ ಸಂಸ್ಕೃತಿ, ಸಂಪ್ರದಾಯಕ್ಕೆ "ಯಾವ ಕಾರಣದಿಂದಲೂ ಧಕ್ಕೆ ಬಾರದಂತೆ ನಮ್ಮ ಹಿರಿಯ ನಾಯಕರು, ಧುರೀಣರು, ಸರ್ಕಾರಿ ಅಧಿಕಾರಿಗಳು ಇದರ ಬಗ್ಗೆ ಕೂಲಂಕುಶವಾಗಿ ಯೋಚನೆ ಮಾಡಬೇಕಾದ ವಿಷಯವಾಗಿದೆ. ಇದರ ಜೊತೆಗೆ ಪ್ರಾಚೀನ ಕಾಲದಿಂದ ನಡೆದುಬಂದ ಗೌಡರ ಸಂಸ್ಕೃತಿ, ಸಂಪ್ರದಾಯ, ಆಚಾರವಿಚಾರಗಳನ್ನು ಸಹ ಉಳಿಸಿಕೊಳ್ಳಲು ಪ್ರಯತ್ನ ಪಡಬೇಕಾದದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ಬೆಂಗಳೂರಿನ ಅರೆಭಾಷೆ ಗೌಡರುಗಳ ಹೆಸರಿನಲ್ಲಿ 2 ಸಮಾಜಗಳು ಸ್ಥಾಪನೆಯಾಗಿ ಹತ್ತಾರು ವರ್ಷಗಳು ಕಳೆದರೂ ಸಹ ಇಲ್ಲಿಯವರೆಗೆ ಬೆಂಗಳೂರು ನಗರದಲ್ಲಿ ನೆಲೆಸಿರುವ ಸಾವಿರಾರು ನಮ್ಮ ಅರೆಭಾಷೆಯ ಗೌಡರುಗಳ ಕುಲಗೋತ್ರಗಳು ಸಿಗದೆ ಇರುವಂತವು ಅಧಿಕ ಸಂಖ್ಯೆಯಲ್ಲಿ ಇರಬಹುದೆಂದು ಅಂದಾಜು ಮಾಡಲಾಗಿದೆ. ಇದಕ್ಕೆ ಕಾರಣ ಏನೆಂಬುದನ್ನು ನಮ್ಮ ಸಮಾಜದ ಹಿರಿಯ ನಾಯಕರುಗಳು ವಿಮರ್ಶೆ ಮಾಡಬೇಕೆಂದು ನನ್ನ ಪ್ರಾರ್ಥನೆ.

● ಕೋಳಿಬೈಲು ನಾಣಯ್ಯ
ಭಾರತೀಯ ದೂರವಾಣಿ ಕಾರ್ಖಾನೆ,
ಬೆಂಗಳೂರು.

## – ಕೊಡಗು ಸಂಗಾತಿ ದೊರೆಯುವ ಸ್ಥಳ –

**ನೀಲಕಂಠೇಶ್ವರ ಸ್ಟೋರ್**, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ.

**ಪೊನ್ನೇಟ ಸುನಿಲ್, ಜನರಲ್ ಸ್ಟೋರ್**, ಭಾಗಮಂಡಲ.

**ಮಾಳಿಗೆ ಮನೆ ಜನಾರ್ಧನ**, ಮರಗೋಡು.

**"ಕೊಡಗು ಸಂಗಾತಿ"** ಪತ್ರಿಕೆಗೆ ಚಂದದಾರರಾಗುವವರು ಹಾಗೂ ಇನ್ನಿತರ ವಿವರಗಳಿಗೆ ಮಡಿಕೇರಿಯ ಈ ನಮ್ಮ ಉಪಶಾಖೆ ಕಛೇರಿಯಲ್ಲಿ ವ್ಯವಹರಿಸಬಹುದು.

ವಿಳಾಸ :

**ಶ್ರೀಮತಿ ಜಾನಕಿ ಬೆಳ್ಯಪ್ಪ**

W/o **ಬೈತಡ್ಕಬೆಳ್ಯಪ್ಪ**, ನಂ. 21-16, ಎಲ್.ಐ.ಸಿ. ಹತ್ತಿರ, ಮಡಿಕೇರಿ.

ದೂರವಾಣಿ : 08272-28047

| ಚಂದಾ ವಿವರ | ರೂ. | ಜಾಹಿರಾತು | ರೂ. |
|---|---|---|---|
| ಅರೆವಾರ್ಷಿಕ | 60 | ಕೊನೆ ರಕ್ಷಾಪುಟ | 1500 |
| ವಾರ್ಷಿಕ | 120 | ಒಳ ರಕ್ಷಾ ಪುಟ | 1000 |
| ಆಜೀವ | 1000 | ಅರ್ಧ ಪುಟಕ್ಕೆ | 500 |
| ಹಿತೈಷಿ | 5000 | 1/4 ಪುಟಕ್ಕೆ | 250 |
| ಪೋಷಕ | 10,000 | | |

# ನಿಮ್ಮ ಪತ್ರಗಳು

## "ಸ್ಪಂದಿಸಲಿ"

ನಿಮ್ಮ ಪಾಕ್ಷಿಕ ಪತ್ರಿಕೆ, ನಂಗೆ ಸಿಕ್ಕಿ ತುಂಬಾ ಖುಷಿ ಆತ್. ನಮಿಗೆ ಸ್ವಾತಂತ್ರ್ಯ ಬಂದ್ ಐವತ್ತ್ ವರ್ಷ ಆಗಿ ಈ ವರ್ಷ ಚಿನ್ನದ ಹಬ್ಬ ಆಚರಣೆ ಮಾಡ್ದ ಈ ಸಂದರ್ಭಲಿ ನೀವು ಕೊಡಗಿನ ಗೌಡ ಜನಾಂಗದ ಬಗ್ಗೆ ಕಾಳಜಿ ವಹಿಸಿ ಒಂದು ದಾರಿ ದೀಪ ಹೊತ್ತಿಸಿ, ನಮ್ಮ ಜನರ ಪ್ರತಿಭೆನ ಹೊರಗೆ ತಾಕೆ ನೀವು ಪ್ರಯತ್ನ ಮಾಡ್ದು ತುಂಬಾ ಸಂತೋಷ. ನಿಮ್ಮ ಕೆಲಸನ ಎಷ್ಟ್ ಕೊಂಡಾಡಿರೂ ಸಾಲದ್, ಗೌಡ್ರುಗಳ ಸ್ಥಾನ, ಮಾನ, ಜನರ ನಡೆ, ನುಡಿ, ಸಂಸ್ಕೃತಿ, ಸಂಪ್ರದಾಯ, ಆಚಾರ ವಿಚಾರಗಳ ಬೆಳಕಿಗೆ ತಂದ್, ದೊಡ್ಡ ಹೆಮ್ಮರ ಆಗಿ ಬೆಳಸಿಕೆ ನಿಮ್ಮ ಪ್ರಯತ್ನಕ್ಕೆ ಸದಾ ನಮ್ಮ ಗುರುಹಿರಿಯರ ರಕ್ಷೆ ಇರಲಿಂತಾ ನನ್ನ ಆಶಯ. ನಿಮ್ಮ ಪತ್ರಿಕೆ ಓದಿ ಕವನ, ಕಥೆ, ಜೀವನ ಚರಿತ್ರೆ, ವ್ಯಕ್ತಿಪರಿಚಯ, ಅವರ ಸಾಧನೆ ಹಿಂಗೆ ವಿಷಯ ಚೆನ್ನಾಗಿ ಮೂಡಿ ಬಂದ್‌ಟ್ಟ್. ಈ ನಮ್ಮ ಪತ್ರಿಕೆ ಪ್ರತಿಯೊಂದು ಗೌಡ ಜನಾಂಗದ ಮನೆ, ಮನೆಗೆ ತಲುಪಿ ಅವರ ಮನಸ್‌ನ ಗೆದ್ದ್ ನಿಮ್ಮ ಕಾರ್ಯಕ್ಕೆ ಸ್ಪಂದಿಸುವಂಗೆ ಆಗಲಿತಾ ನನ್ನ ಅನಿಸಿಕೆ. ಮತ್ತೆ ನಿಮ್ಮ ಪತ್ರಿಕೆ ವಿಶಾಲವಾಗಿ ಬೆಳೆಯಲಿ ಅಂತ ಹೇಳಿ ನಿಮ್ಮೆಲ್ಲರಿಗೂ ಭಗವಂತ ಸರ್ವ ಶಕ್ತಿ ಕೊಟ್ಟ್ ಕಾಪಾಡಲಿಂಲಿ, ನಿಮಿಗೆ ಶುಭ ಕೋರಿನೆ.

**ಸಿ.ಟಿ. ಚಿಣ್ಣಪ್ಪ,**
ಯುವಜನ ಸೇವಾ ಮತ್ತು ಕ್ರೀಡಾಧಿಕಾರಿ,
ಕನ್ನಂಡಬಾಣೆ, ಮಡಿಕೇರಿ.

## ಅಭಿನಂದನೆ

ನೀವು ಪ್ರಕಟಿಸುತ್ತಿರುವ "ಕೊಡಗು ಸಂಗಾತಿ" ಪತ್ರಿಕೆಯು ಬಹಳ ಚೆನ್ನಾಗಿ ಮೂಡಿಬರುತ್ತಿದೆ. ನಮ್ಮ ಗೌಡ ಸಂಸ್ಕೃತಿ, ಆಚಾರ ವಿಚಾರಗಳು ಅಲ್ಲದೆ ಆಗೆ ತೆಗೆಯುವಾಗ ಹೇಳುವ ಹಾಡು, ನಾಟಿ ನೆಡುವಾಗ ಹೇಳುವ ಉಯ್ಯಾರೆ ಹೊಯ್ಯಾ... ಪ್ರಕಟಿಸಿ, ಕೊಡಗಿನ ಕಾವೇರಿ ಎಷ್ಟು ಪ್ರಸಿದ್ಧವೋ ಅಷ್ಟೇ ಪ್ರಸಿದ್ಧಿಯನ್ನು "ಕೊಡಗು ಸಂಗಾತಿ" ಪಡೆಯುವಂತಾಗಲಿ ಎಂದು ಆಶಿಸುತ್ತೇನೆ.

**ಯಂ.ಜಿ. ಹರಿಣಿಗೋಪಾಲ್**, ಬೆಂಗಳೂರು.

## ಜನಾಂಗಕ್ಕೊಂದು ಗುರುವಿನ ಅವಶ್ಯಕತೆ

ತಾವು ಪ್ರಕಟಿಸಿದ ಸಂಚಿಕೆ 7ರಲ್ಲಿ [1-7-97 ರಿಂದ 15-7-97] ಸಂಪಾದಕೀಯವು ಶ್ಲಾಘನೀಯವು, ಸಮಯೋಚಿತ ಹಾಗೂ ಅರ್ಥಗರ್ಭಿತವಾಗಿದೆ.

ದಿನದಿನಕ್ಕೆ ಕ್ಷೀಣಿಸುತ್ತಾ ಹೋಗುತ್ತಿರುವ ನಮ್ಮ ಸಂಸ್ಕೃತಿಯನ್ನು ಎತ್ತಿ ಹಿಡಿಯಲು ಒಬ್ಬ ನಾಯಕ ಅತೀ ಅವಶ್ಯಕವಾಗಿದೆ. ಇದಕ್ಕೆ ಈಗಿರುವ ರಾಜಕೀಯ ಮುಖಂಡರಿಂದ ಸಾಧ್ಯವಾಗುವುದಿಲ್ಲ. ಕಾರಣ ರಾಜಕೀಯ ಮುಖಂಡರುಗಳು ಆಯಾಯ ರಾಜಕೀಯ ಪಕ್ಷಗಳ ಧ್ಯೇಯ ಧೋರಣೆಗಳ ಪ್ರಚಾರಕ್ಕಾಗಿ ಹೋರಾಡುತ್ತಾರೆಯೇ ಹೊರತು, ಒಂದು ಜನಾಂಗದ ಧಾರ್ಮಿಕ ವಿಷಯದ ಆಗುಹೋಗುಗಳಲ್ಲಿ ಹೆಚ್ಚಿನ ಆಸಕ್ತಿವಹಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ನಮ್ಮ ಜನಾಂಗದವರೇ ಆದವರೊಬ್ಬರನ್ನು "ಗುರು" ಆಗಿ ಆರಿಸಬೇಕು. ಉದಾ : ಒಕ್ಕಲಿಗರ ಗುರು ಬಹಳ ಹಿಂದೆ ಶೃಂಗೇರಿ ಜಗದ್ಗುರು ಆಗಿದ್ದರು. ಆದರೆ ಶೃಂಗೇರಿಯ ಜಗದ್ಗುರು ಇಡೀ ಹಿಂದೂ ಸಮಾಜದ ಗುರುವಾದುದರಿಂದ ಒಕ್ಕಲಿಗರ ಸಂಸ್ಕೃತಿ ಮತ್ತು ಧಾರ್ಮಿಕ ವಿಧಿವಿಧಾನಗಳಲ್ಲಿ ಹೆಚ್ಚಿನ ಆಸಕ್ತಿವಹಿಸಲು ಸಾಧ್ಯವಾಗದ ಕಾರಣ ಒಕ್ಕಲಿಗರೆಲ್ಲರು ಸೇರಿ ಒಕ್ಕಲಿಗರರೊಬ್ಬರನ್ನು ಗುರು ಆಗಿ ಆರಿಸಿ ಆದಿ ಚುಂಚನಗಿರಿ ಮಠವನ್ನು ಸ್ಥಾಪಿಸಿ ಆ ಮಠದ ಮುಖಾಂತರ ಒಕ್ಕಲಿಗರ ಪುರೋಭಿವೃದ್ಧಿಗೆ ಕೆಲಸ ಮಾಡುತ್ತಿದ್ದಾರೆ. ಆದಿ ಚುಂಚನಗಿರಿ ಮಠದ ಮುಖಾಂತರ ಹಲವಾರು ಪ್ರೌಢಶಾಲೆಗಳು ಕಾಲೇಜುಗಳು, ವೈದ್ಯಕೀಯ, ಇಂಜನಿಯರಿಂಗ್ ಕಾಲೇಜುಗಳು ಸ್ಥಾಪಿತವಾಗಿವೆ. ಅವರ ಮುಖಾಂತರ ಈಗ ಇಡೀ ಕರ್ನಾಟಕ ರಾಜ್ಯದ ಒಕ್ಕಲಿಗರ ಚರಿತ್ರೆ ಸಂಸ್ಕೃತಿ ವಿಷಯಗಳಲ್ಲಿ ಸಂಶೋಧನೆ ಮಾಡುತ್ತಿದ್ದಾರೆ. ನಾನು ಸಹ ಅವರಿಗೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗೌಡರ ಚರಿತ್ರೆ ಮತ್ತು ಸಂಸ್ಕೃತಿ ವಿಷಯ, ಹಲವಾರು ಲೇಖನಗಳನ್ನು ಹಾಗೂ ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದೇನೆ.

ಅದೇ ರೀತಿ ಕೊಡಗು ಮತ್ತು ದ. ಕ. ಗೌಡರ ಸಂಸ್ಕೃತಿಯನ್ನು ಕಾಪಾಡಲು ಅವರ ಧಾರ್ಮಿಕ ವಿಧಿ ವಿಧಾನಗಳನ್ನು ಜನತೆಗೆ ಬೋಧಿಸಲು ನಮಗೂ ಒಬ್ಬ ನಮ್ಮದೇ ಆದ ಗುರುಸ್ಥಾನವಿರುವುದು ಒಳ್ಳೆಯದು ಎಂದು ನಿಮ್ಮ ಅಭಿಪ್ರಾಯವನ್ನು ಪುಷ್ಟೀಕರಿಸುತ್ತೇನೆ.

ಸಿಂಹದ ಗಾಂಭೀರ್ಯ, ವಿವೇಕಾನಂದರ ವಿದ್ವತ್ ಇರುವ ಒಬ್ಬ ಗುರುವನ್ನು ಹುಡುಕಲೇಬೇಕು. ಅರಮನೆ, ಗುರುಮನೆ ಹಿಂದಿನ ಸಂಸ್ಕೃತಿಯ ಕಲೆಗಳಿಗೆ ಸ್ಫೂರ್ತಿಕೊಡುವ ಕೇಂದ್ರಗಳಾಗಿದ್ದವು. ಅರಮನೆಗಳು ಮಾಯವಾದವು. ಗುರು ಮನೆಯಾದರು ಬೇಡವೇ. ಸುಸಂಸ್ಕೃತ ಸಮಾಜದ ನಿರ್ಮಾಣಕ್ಕೆ ಗುರುಮನೆ/ಐನ್‌ಮನೆಗಳ ಅವಶ್ಯಕತೆ ಇದೆ.

**ಪೂಜಾರಿ ಮೊಣ್ಣಪ್ಪ,**
ವಕೀಲರು, ಬೆಂಗಳೂರು.

## ಅರೆ ಭಾಷಿಕೆ ವಿಭಾಗ

# ಮೀನುಗೈಪೂನು, ಪೂವಣ್ಣನೂ....!

**ಪೂ**ವಣ್ಣಂಗೆ ಕಾಟ್ಲಾಮೀನ್‌ತೇಳಿರೆ ಪ್ರಾಣ! ಒಂದಿನ ಗೋಣಿಕೊಪ್ಪದ ಮಾರ್ಕೇಟ್ಟಗೆ ಹೋಗಿತ್ತ್. ಅಂದ್ ದೊಡ್ಡ ದೊಡ್ಡ ಕಾಟ್ಲಾ ಮೀನ್ ಬೇರೆ ಮಾರ್ಕೆಟ್ಟಗೆ ಬಂದಿತ್. ಇನ್ನ್ ಪೂವಣ್ಣನ ಕೇಳೊಕಾ ? ಮೂರು ಕಿಲೋ ತೂಕದ ಮೀನ್‌ನೇ ತಕ್ಕಂಡತ್. ಸೀದ ಮನೆಕಡೆ ಬಾತ್. ಬಂದಂಗೆ ಅವನೇ "ಅಚ್‌ಕಟ್" ಮಾಡಿಕೆ ಕುದ್‌ಕಂಡತ್. ಸಾಮಾನ್ಯವಾಗಿ ಗಂಡ್ ಜನ ಅಂಥ ಕೆಲ್ಸಕ್ಕೆಲ್ಲ ಕೂರ್‌ದ್‌ಲೆ. ಆದರೆ ಪೂವಣ್ಣ ಹಂಗಲ್ಲ. ಹೆಣ್ಣಿಗೆ ಕಷ್ಟ ಕೊಡಿಕಾಗದ್‌ತೇಳುವ ಪೈಕಿ. ಸರಿ, ಅಚ್‌ಕಟ್ಟೆಲ್ಲ ಆದ ಮೇಲೆ ಹೆಣ್ಣ್‌ಗೆ ಹೇಳ್ತ್. "ನೋಡು ಇದರ್ಲಿ ಅರ್ಧನ ಹುಳ್ಳಂಗಾಗಿ ಗೈಪು ಮಾಡ್. ಬಾಕಿ ಇರ್‌ದರ್ನ ಫೈಕ್ಲಾಸಾಗಿ ಹೊರಿ". ಹಿಂಗೆ ಹೇಳಿ ಪೂವಣ್ಣ "ಪ್ಯಾಕೆಟ್" ಅಂಗಡಿಗೆ ಹೋತು.

ಎರಡ್ ಪ್ಯಾಕೇಟ್ ಸಾರಾಯಿ ಏರಿಸಿದ ಪೂವಣ್ಣ ಮನೆಗೆ ಬಾತ್. ಮನೆಗೆ ಬಾಕನ ಅಲ್ಲಿ ಸುತ್ತಮುತ್ತೆಲ್ಲಾ ಮೀನ್‌ಗೈಪುದ್ ಗಮನ ಬಾಕನ ಇವನ ಬಾಯಿ ತುಂಬಾ ನೀರ್ ತುಂಬಿಕಂಡತ್. ಇನ್ನ್ ಹೊರ್ದ ಮೀನ್‌ನ ಗಮನಂತೂ ಆಹಾ ! ಗಮನ ಮೂಗಿಗೆ ಬಡೀತಿದ್ದಂಗೆ ಹೊಟ್ಟೆತುಂಬಿ ಕಂಡ್ ಬಂದಂಗಾತ್. ಹೆಣ್ಣಿಗೆ ಹೇಳ್ತ್ "ನಾನ್ ತೋಟಕೆ ಹೋಗಿ ನಾಕ್ ನಿಂಬುಳಿ ತನ್ನೆ. ನೀನ್ ಆಗ ಎಂಟ್ ರೊಟ್ಟೆ ಮೆತ್ತಿ ಬುಡು" ಹೆಣ್ಣ್ ಆತ್ ಮಾಡಿನೆಂತ ಹೇಳ್ತ್. ತೋಟಲಿ ಕರ್ಟ್ ನಿಂಬುಳಿನೇ ಇದ್ದದ್. ಅಂತೂ ಅದರ್ನೇ ಕೊಯ್ಕಂಡ್ ಬಾತ್. ಬಂದಂಗೆ ಆ ನಿಂಬುಳಿನ ನೀಂಬಿ ನೀಂಬಿ ನೀರ್ ಮಾಡ್ತ್. ಆ ನಿಂಬುಳಿ ಗಮನ, ಈ ಮೀನ್ ಗೈಪುದು ಗಮನ, ಅಲ್ಲಿ ಪೊಕ್ಕಳ ರೊಟ್ಟೆ ಅದೆಲ್ಲಾ ಕಂಡಾಕನ ಪೂವಣ್ಣಂಗೆ ಹೆಣ್ಣ್‌ನ ಮೇಲೆ ಪ್ರಿತಿ ಹೆಚ್ಚಾತ್.

"ಶಾರಿ, ಓ ಶಾರಿ, ಶಾರದಾ... ನೀನ್ ನಂಗೆ ಹೇಳಿ ಮಾಡ್ಸಿದ ಹೆಣ್ಣ್‌ನೆ. ನೀನ್ ನನ್ನ ಚಿನ್ನನೇ. ನಿನ್ನ ಕೈಗೆ ಕೊಟ್ಟದ್ದೆಲ್ಲಾ ವಜ್ರ ಆಬುಟ್ಟದೆನೆ. ನೀನ್ ನನ್ನ ಬಂಗಾರಿನ" ಹಿಂಗೆ ಹೆಣ್ಣ್‌ನ ಹೊಗಳ್ತಾ ಇರಕನ ಹೆಣ್ಣ್‌ನ ಮುಖ ಮೊಟ್ಟೆ ಹೇಂಟೆದ್ ಮುಖ ಕೆಂಪಾದೆಲ್ಲ ಹಂಗೆ ಕೆಂಪಾತ್. ಒಂದ್‌ಕಡೆಂದ ಗಂಡನ ಹೊಗಳಿಕೆ, ಇನ್ನೊಂದ್ ಕಡೆಂದ ಬೆಂಕಿದ್ ಕಾಚಲ್. "ನೀವ್ ಸುಮ್ಮನಿರಿ ಒಮ್ಮೆಂತ" ಹೆಣ್ಣ್ ಹೇಳಿಕಂಡ್ ರೊಟ್ಟೆದ್ ಬೂದಿನೆಲ್ಲಾ ದಡ್ ಬಡ್‌ತ ಹೊಡ್ದ್ ರಟ್ಟೆಸಿತ್. ಒಂದರ ಮೇಲೊಂದ್ ರೊಟ್ಟೆನ ತಂದ್ ಮೇಜಿನ ಮೇಲೆ ಇಸಿತ್. ಗೈಪು ಚಿಟ್ಟೆನೂ, ಹೊರ್ದ ಮೀನ್‌ನೂ ತಂದ್ ಮಡಿಗಿತ್. ನಿಂಬುಳಿನ ಕೊಯ್ದ್ ಇಸಿತ್. ಪೂವಣ್ಣನ ಬಟ್ಲೆಗೆ ಇಕ್ಕಿತ್. ಅವುಳೂ ಇಕ್ಕಿಕಂಡತ್. ನಿಂಬುಳಿನ ಲಾಯ್ಕ ಎಲ್ಲಾ ತುಂಡುಗಳಿಗೂ ಹನಿಕಿಸಿಕಂಡೋ. ಪೂವಣ್ಣ ಬರೀ ಬಾಯಿಗೆ ಒಂದ್ ತುಂಡ್‌ನ ಇಸಿತ್. ಆಹಾ : ನನ್ನ ಪೂರ್ವ ಜನ್ಮದ ಪುಣ್ಯ ! ಎಷ್ಟ್ ರುಚಿಯಾಗಿ ಮಾಡಿಯೊಳ. ಹಿಂಗೆ ಹೇಳಿಕಂಡ್ ಇಬ್ಬರೂ ಊಟ ಮಾಡ್ತಾ ಇದ್ದೊ. ಸಾಮಾನ್ಯವಾಗಿ ಗದ್ದಾಳದ ಅಡುಗೆ ಮಾಡ್ದ ದಿನ ಉಂಬಕೆಕೂರ್‌ಕನ, ಒಂದೊ ಗಂಡ, ಇಲ್ಲೆ ಹೆಣ್ಣ್ ಕಾಲ್‌ಕೆರಕಂಡ್ ಜಗಳ ಶುರು ಮಾಡಿವೆ. ಅಂದ್‌ನ ಊಟ ಅರ್ಧಲೇ ಆಗಿ ಜಗಳಲೇ ಊಟ ಕೊನೆ ಆದೆ. ಆದರೆ ಪೂವಣ್ಣನ ಮನೇಲಿ ಹಂಗೆ ಆತ್‌ಲೆ. ರೊಟ್ಟೆ ಪೂರಾಮುಗಿತಾ ಇರ್‌ಕನ ಕಡೇಗೊಂದ್ ತುಂಡ್ ಹೊರ್ದ ಮೀನ್‌ನ ಹಾಕಿಕಂಡ್ ಪೂವಣ್ಣ ತಿಂತಾ ಇತ್ತ್. ತಿಂಬಕನ ಏನಾತ್ ? ಒಂದ್ ಮುಳ್ಳು ಇವನ ದೊಂಡೆಗೆ ಚುಚ್ಚಿಕಂಡತ್. ಇಂವ ಬೆರಳ್ ಹಾಕಿತ್. ಮುಳ್ಳು ಇನ್ನೂ ಲಾಯ್ಕ ಚುಚ್ಚಿಕಂಡತ್. ಹೆಣ್ಣ್ ಓಡಿ ಅನ್ನನ ಮುದ್ದೆಮಾಡಿ ನುಂಗಿಕೆ ಕೊಟ್ಟತ್ ಇಂವ ಆದರ್ನ್ನೂ ನುಂಗಿತ್. ಆದರೂ ಮುಳ್ಳು ಬಲಾಗಿ ಚುಚ್ಚಿಕಂಡತ್. ಪೂವಣ್ಣಂಗೆ ಮೂರು ಲೋಕ ಕಾಣುವಂಗಾತ್. ಏನೇನೋ ಆಗ್ತಾ ಉಟ್ಟು. ದಮ್‌ಕಟ್ಟೆದಂಗೆ ಆತ್. ಉಸಿರೇ ನಿತ್ತ್ ಹೋದಾಂಗೆಲ್ಲಾ ಆಗಿ ಜೋರಾಗಿ ಅಯ್ಯೋತ ಕಿರ್‌ಚಿಬುಟ್ಟದೆ.

"ಅಯ್ಯೋ ಇದೆಂತಾ ಕರ್ನ್ಸ್. ಕೆಸನ ಗೈಪು ತಿಂದ್ ಮಲಗಿದ ಪೂವಣ್ಣಂಗೆ ಈ ರೀತಿ ಕರ್ನ್ಸ ಕಾಂಬೊಕಾ ? ಹೆಣ್ಣ್ ಜಗಳಾಡಿಕಂಡ್ ತೌರ್ ಮನೆಗೆ ಹೋದವಳು ಅಲ್ಲೇ ಕುಕ್ಕುರು ಬಡ್ದುಟ್ಟು. ದರ್ವೇಸಿಂತ ಹೆಣ್ಣ್‌ಗೆ ಬಯ್ಕಂಡ್ ಹುಲ್ಲುಜ್ಜಿತ್. ರಾತ್ರೆದ್ ಕೆಸನ ಗೈಪು ಹಾಂಕಡ್ ತಂಗಳ ಊಟ ಮಾಡಿ ಗದ್ದೆ ಕ[illegible] ಹೋದ ಪೂವಣ್ಣ ಪಾಪ ಅಲ್ಲ ?

● ಬಿ.ಆರ್. ಜೋಯಪ್ಪ, ಮದೆ.

---

## ಒಡ್ಸ ಕಥೆ

ರಕ್ಕಾಸಿ ಬಾಳೆಗೆ ಸಿಕ್ಕಾಕಿ ನೋಡ್
ಬಂದುಟ ಬಾತ್‌ಲ್ಲೆ ಕೈಯ್ಯಾಕಿ ನೋಡ್
ಸಿಕ್ಕಿದ ಗುಂಡಣ್ಣನ ತಿಂದ್ ನೋಡ್
ಪ್ರಶ್ನೆ: ಈ ಗುಂಡಣ್ಣ ಯಾರ್ ?

ಮಜ್ಜಿಗೆ ಕಡಿಯುಕಾಕನ ಬೆಣ್ಣೆ ತೆಗೆಯುದು.

● ಊರೋಳನ ಚಂದ್ರಕಲಾ,
ಅಮಂದೂರು.

# ಪೆದ್ದ ಪಿಳ್ಳಿಕ (ಅಜ್ಜಿ ಕಥೆ)

ಒಂದೂರ್‌ಲಿ ಒಂದ್ ಅಜ್ಜಿ ಇತ್ತ್. ಆ ಅಜ್ಜಿಗೆ ಎರ್ಡ್ ಪಿಳ್ಳಿಕ. ಒಬ್ಬ ಮೋರ ಮತ್ತೊಬ್ಬ ಕೋರ. ಆ ಪಿಳ್ಳಿಕಳ ಅಜ್ಜಿ ತುಂಬಾ ಪ್ರೀತಿಲಿ ಸಾಂಕಿಟು. ಒಂದಿನ ಏನಾತ್ ಗೊತ್ತುಟಾ ? ಕಾಫಿ ತೋಟಲಿ ಪಿಳ್ಳಿಕ ಕೆಲ್ಸ ಮಾಡ್ತಿದ್ದೊ. ಆಗ ಅವ್ಕೆ ತುಂಬಾ ಕುಡ್ಯಕೆ ಆದೆ. ಅವರ ಹಕ್ಕಲೆ ಎರ್ಡ್ ಕೊಡ್‌ಪಾನ ಇತ್ತ್. ಅಣ್ಣ ತಮ್ಮನೊಟ್ಟಿಗೆ ನೀನ್ ಹೋಗಿ ಒಂದ್ ಕೊಡಪಾನಲಿ ಬಾವಿಂದ ನೀರ್ ತಕಂಡ್ ಬಾ ಅಂತ ಹೇಳ್ತ್. ಆಗ ತಮ್ಮ ಹೋಗಿ ಕೊಡಪಾನನ ತಕಣ್‌ಕನ ಕೊಡಪಾನಕೆ ತುಂಬಾ ಜ್ವರ ಬಂದಿತ್ತ್. ತಮ್ಮ ಅಣ್ಣನಕ್ಕಲೆ ಹೋಗಿ ಅಣ್ಣಣ್ಣ ಕೊಡಪಾನಕ್ಕೆ ತುಂಬಾ ಜ್ವರ ಬಂದುಟು. ಈಗ ಎಂತ ಮಾಡ್ದೊಂತ ಅಣ್ಣನ ಕೇಳ್ತ್. ಆಗ ಅಣ್ಣ, ನೀನ್ ಕೊಡಪಾನನ ಅರ್ಜೆಂಟಾಗಿ ಡಾಕ್ಟ್ರ ಹಕ್ಕಲೆ ತಕಂಡ್ ಹೋಗುತ ಹೇಳ್ತ್. ತಮ್ಮ ಕೊಡಪಾನನ ತಕ್ಕಂಡ್ ಹೋಕಾಕನ ಡಾಕ್ಟ್ರೇ ಎದ್ರಿಗೆ ಸಿಕ್ಕಿಬುಡೊಕ ! ಇದ್ಕೆ ಡಾಕ್ಟ್ರ ಕೊಡಪಾನನ ತಕ್ಕಂಡೋಗಿ ಕುತ್ತಿಗೆಗೆ ಹಗ್ಗ ಹಾಕಿ ಬಾವಿಗೆ ಬುಡಿ. ಆಗ ಅದ್ರ ಜ್ವರ ಹೋದೆಂತ ಹೇಳ್ತ್. ಮೋರನು ಕೋರನು ಸೇರಿ ಕೊಡಪಾನದ ಕುತ್ತಿಗೆಗೆ ಹಗ್ಗಕಟ್ಟಿ ಬಾವಿಗೆ ಬುಟ್ಟ್ ಮೇಲೆ ತೆಗೊದ್ದ ಆಗ ಜ್ವರ ಬುಟ್ಟ್ ಹೊಗುಟು. ಹೀಂಗೆ ಇರ್‌ಕಾಕನ ಮತ್ತೊಂದ್ ಕತೆ ನಡ್ತ್. ಅದ್ ಏನೊಂತೇಳ್ರೆ–ಒಂದಿನ ಅಜ್ಜಿಗೆ ಜ್ವರ ಬಾತ್. ತಲೆ ಎತ್ತಿಕೆ ಆದ್ಲೆ. ಆಗ ಅಜ್ಜಿ ಪಿಳ್ಳಿಕಳೊಟ್ಟಿಗೆ ಹೇಳ್ತ್. ನಂಗೆ ಕೆಲ್ಸ ಮಾಡ್ಕೆ ಮನಿ ಆದುಲೆ. ನಂಗೆಂತಾರ್ ಸ್ವಲ್ಪ ಮದ್ ಮಾಡಿಕೊಡಿನೇಂತ ಹೇಳ್ತ್ ಆಗ ಪಿಳ್ಳಿಕ ಹೇಳ್ದೊ, ಅಜ್ಜಿ ನಿಂಗೆ ಮದ್ ಗಿದ್ ಏನ್ ಬೇಡ. ಅಂದ್ ಡಾಕ್ಟ್ರ ಹೇಳ್ದಂಗೆ ಮಾಡ್ವೆಂತೇಳಿ, ಅಜ್ಜಿನ ಬಾವಿ ಹಕ್ಕಲೆ ಕರ್ಕಂಡೋಗಿ ಅಜ್ಜಿನ ಕುತ್ತಿಗೆಗೆ ಹಗ್ಗನ ಕಟ್ಟಿ ಅಜ್ಜಿನ ಬಾವಿಗೆ ಹಾಕಿದೊ. ಪುನಃ ಮಕ್ಕ ಅಜ್ಜಿನ ಮ್ಯಾಲೆ ಎಳ್ದೊ. ಎಳ್ದ ನೋಡ್ರೆ ಅಜ್ಜಿನ ಜ್ವರ ವಾಸಿ ಆಗುಟು [ಅಜ್ಜಿನ ಪ್ರಾಣ ಹೋಗುಟು] ಈ ಪಿಳ್ಳಿಕ ಅಜ್ಜಿನ ಕರ್ದವೇ ಕರ್ದವೇ ಎಲ್ಲಿ ಮಾತಾಡ್ದ್. ಪಿಳ್ಳಿಕ ಕಣ್ಣ್‌ಕಣ್ಣ್ ಬುಟ್ಟ್‌ಕಂಡ್ ಮರ್ಡಿಕೆ ಸುರು ಮಾಡ್ದೊ. ಈಗ ಮರ್ಡ್ ಏನ್ ಪ್ರಯೋಜನ. [ಈ ಕತೆನ ಅರ್ಥ ಏನ್ ತೇಳ್ರೆ, ಕೊಡಪಾನನ ಬಿಸ್ಲ್‌ಲಿ ಇಟ್ಟ್, ಮತ್ತೆ ಮುಟ್ಟ್‌ಕಾಕನ ತುಂಬಾ ಕಾದಿತ್. ಮತ್ತೆ ನೀರ್‌ಗೆ ಹಾಕ್‌ಕಾಕನ ತಣ್ಣಂಗಾದೆ, ಅದ್ಕೆ ಹೇಳ್ದು, ಮಕ್ಕಳ ಬಾಳ ಪ್ರೀತಿಲಿ ಸಾಂಕಿಕಾಗದ್].

● ಪಾಂಡಿ ಯು. ಸೀತಮ್ಮ
ಬಿ.ಎಂ. ಆಸ್ಪತ್ರೆ, ಮೈಸೂರು.



**ದಿನಾಂಕ 3–12–1997ರಂದು ನಡೆದ ಕೊಡಗು ಬಂದ್‌ನ ದಿವಸ ಸಂಪಾಜೆಯ ಗೇಟಿನ ಬಳಿಯ ಒಂದು ದೃಶ್ಯ**

# ಸಿಂಗಲ್ ನಂಬರ್ ಸೀನ

**ಸೀನ್** ಅಪ್ಪ ಅವ್ವಂಗೆ ಒಬ್ಬನೇ ಮಖ. ಇಂವ ಬಹಳ ಸಾಧು ಸ್ವಭಾವದಂವ. ಓದು ಬರೈಕ್ಕೆ ಸೀನ ಬಹಳ ಚುರ್ಕು ಇತ್ತ್. ಇಂವ ಓದಿ ಮುಂವಕ್ಕೆ ಸರ್ಕಾರಿ ಕೆಲ್ಸಕ್ಕೆ ಸೇರಕುತ ನೋಡ್ಚ್. ಆದರೆ ಸರ್ಕಾರಿ ಕೆಲ್ಸಕ್ಕೆ ದುಡ್ಡ್ ಕೇಳುವೆ. ಅದೇ ಸರ್ಕಾರಿ ಕೆಲ್ಸಕ್ಕೆ ಇವನ ಒಳ್ಳೆ ದೋಸ್ತಿ "ಪುಟು" ತೇಳುವ ಹೈದ ದುಡ್ಡ್ ಕೊಟ್ಟ್ ಸೇರ್ಸಿದೆ.

ಸೀನ ದುಡ್ಡ್ ಖರ್ಚ್ ಮಾಡದೆ ಬ್ಯಾಂಕ್‌ಲಿ ಡಿಪಾಸಿಟ್ ಇಟ್ಟದೆ. ಹಿಂಗೆ ದುಡ್ಡ್ ಕಲೆಕ್ಟ್ ಮಾಡಿ "ಗಲ್ಫ್‌ಗೆ" ಹೋಕೆ ಪಾಸ್‌ಪೋರ್ಟ್ ಮಾಡ್ಸಿದೆ. ಸೀನ ಖಾಸಗಿ ಕೆಲ್ಸಕ್ಕೆ ಟ್ರೈ ಮಾಡಿ ಸೀನ ಗಲ್ಫ್‌ಗೆ 3 ವರ್ಷ ಕೆಲ್ಸಕ್ಕೆ ಹೋದೆ. ಅಲ್ಲಿ ಕೆಲ್ಸ ಪರ್ಮನೆಂಟ್ ಆದೆ. ಅಲ್ಲಿ ಸೀನ ಸಂಬಳ ತೆಗ್ದ್ ದುಡ್ಡ್ ಖರ್ಚ್ ಮಾಡದೇ 3 ವರ್ಷ ಕಳ್ದ್ ಬಾತ್. ಆಗ ಸೀನಂಗೆ ಮದುವೆ ವಯಸ್ಸ್ ಬಂದಿದ್ದದೆ. ಹಿಂಗೆ ಸೀನ ಒಂದು ಒಳ್ಳೆ ಗೂಡೆನ ಮದುವೆ ಆದೆ. ಆಗ ಗೂಡೆಗೆ ತುಂಬಾ ಖುಷಿ. ಯಾಕೆತ್ತೇಳ್ರೆ, ನನ್ನ ಗಂಡ ನಮ್ಮ ದೇಶ ಬುಟ್ ಹೊರದೇಶಲಿ ಇರ್ದು ತೇಳಿ. ಮದುವೆ ಯಾಗಿ ಪುನಃ ಹಿಂವಕ್ಕೆ ಗಲ್ಫ್‌ಗೆ ಹೋದೆ. ಅಲ್ಲಿ ಸೀನ ಮಾಮೂಲಿ ಕೆಲ್ಸ ಅಲ್ಲದೆ O.T. ಮಾಡಿ ಒಂದುವರೆ ವರ್ಷಲಿ ವಾಪಸ್ ಮನೆಗೆ ಬಾಕನ ಬೇಕಾದಷ್ಟ್ ದುಡ್ಡ್ ಅಲ್ಲದೇ ಹೆಣ್ಣ್‌ಗೆ, ಕೂಸುಗೆ ಬೇಕಾದಷ್ಟ್ ಚಿನ್ನಾಭರಣ ಮಾಡ್ಸಿತಾತ್. ಇದ್ರ ನೋಡಿ ನೆರೆಮನೆಯವ್ಕೆ ನಂಜಿ ಆದೆ.

ಸೀನ ಮತ್ತೆ ಪುನಃ ಗಲ್ಫ್‌ಗೆ ಹೋದ್ಲೆ. ಇವಂಗೆ ದುಡ್ಡಿನ ದಬ್ಬಾಳಿಗೆ ಇತ್ತ್. ದುಡ್ಡ್‌ನ ಖರ್ಚ್‌ಮಾಡಿಕೆ ಒಂದು ಉಪಾಯ ಮಾಡ್ತ್ ಆ ಉಪಾಯ ಯಾವುದ್ ತ್ತೇಳ್ರೆ ಕೆಲ್ಸ ಮಾಡ್ವು ಅಲ್ಲ, ಬೀಡಿ ಸಿಗರೇಟ್ ಸೇದುದುಅಲ್ಲ, ಕುಡಿಯುವ ಅಭ್ಯಾಸ ಅಲ್ಲ ಇದ್ಯಾವುದಲ್ಲದೇ 'ಸಿಂಗಲ್' ನಂಬರ್ ಲಾಟ್ರಿನ ತೆಗ್ಯಕೆ ಸುರು ಮಾಡ್ದೆ. ಮತ್ತೆ ಜೂಜಾಟ ಆಡಿಕೆ ಸುರು ಮಾಡ್ತ್. ಜೂಜಾಟಲಿ ಸುರುಗೆ ತುಂಬಾ ಅದೃಷ್ಟ ಇರ್ಕನ ಕೈ ತುಂಬಾ ದುಡ್ಡ್ ಸೇರ್ಚ್.

ಇಂವನ ಅದೃಷ್ಟ ಸ್ವಲ್ಪ ಓರೆಯಾಕನ ಕಟ್ಟಿದ ದುಡ್ಡ್ ಎಲ್ಲಾ ಲಾಟ್ರಿ ಅಂಗಡಿಗೆ ಸೇರ್ದ್, ಸೀನನ ಆಸೆ ಇನ್ನೂ ನಿಲ್ಲುದ್ಲೆ. ಇಂವ ಹೆಚ್ಚ್ ಹೆಚ್ಚ್ ದುಡ್ಡ್ ಕಟ್ಟಿ ಜೂಜಾಟಲಿ ಇಂದ್ ಸಿಗದಿದ್ರೂ ನಾಳೆ ಸಿಕ್ಕುದುತ್ತೇಳಿ ಗ್ಯಾನ ಮಾಡಿ ದುಡ್ಡ್ ಕಟ್ಟಿದೆ. ಅಂದ್ ಒಬ್ಬನ ಖರ್ಚ್. ಈಗ ಹೆಣ್ಣ್-ಮಕ್ಕಳ ಖರ್ಚ್ ಜಾಸ್ತಿ ಯಾದೆ. ದುಡ್ಡ್ ಜೂಜಾಟಕ್ಕೆ ಆದೆ.

ಸೀನ ಜೂಜಾಟ ಆಡಿ ಸುರುಗೆ ಮಖನ ಚಿನ್ನನ ಬ್ಯಾಂಕ್‌ಲಿ ಇಟ್ಟ್ ಸಿಂಗಲ್ ನಂಬರ್ ಆಡ್ದೆ. ಇದರ್ಲಿ ಮಖನ ಚಿನ್ನ ಹೋತ್. ಮಖನ ಚಿನ್ನನ ಬಿಡ್ಸಿಕ್ಕೆ ಹೆಣ್ಣ್‌ನ ಚಿನ್ನನ ಬ್ಯಾಂಕಲಿ ಇಟ್ಟದೆ. ಇದರ್ಲೂ ಮಂಖನ ಚಿನ್ನನ ಬಿಡ್ಸದೇ ಸಿಂಗಲ್ ನಂಬರ್ಲಿ ಕಳ್ದದೆ. ಮನೆ ತುಂಬಾ ಚಿನ್ನ ಇರ್ಕನ ಖುಷಿಲಿ ಇರತ್ತಿದ್ದವು, ಈಗ ಚಿನ್ನ ಇಲ್ಲದೇ ಹೆಣ್ಣ್-ಮಕ್ಕ ಯಾರೊಟ್ಟಿಗೂ ಮಾತಡುದ್ಲೆ. ಹೆಣ್ಣ್ ಲಾಟ್ರಿ ದುಡ್ಡ್ ಇಂದ್ ಸಿಗದಿದ್ರೂ ನಾಳೆ ಸಿಕ್ಕಿದೆತೇಳಿ ಲಾಟ್ರಿ ತೆಗ್ಯಕೆ ದುಡ್ಡ್ ಪೂರ್ತಿ ಕೊಟ್ಟದೆ.

ದುರಾದೃಷ್ಟ ಇವರ ದುಡ್ಡ್ ಕಳ್ಕಂಡ್, ಲಾಟ್ರಿ ದುಡ್ಡ್‌ನ ಸಹ ಕಳ್ಕಂಡವೆ. ಕಡೆಗೆ ಇವನ ಹತ್ರ ಸ್ವಲ್ಪನೇ ದುಡ್ಡ್ ಇರ್ದ್. ಇದರ್ಲಿ ಲಾಟ್ರಿ ತೆಗ್ದದೆ. ಅದರಲ್ಲಿ ಸ್ವಲ್ಪ ದುಡ್ಡ್ ಸೇರ್ದ್. ಸೇರ್ದ ದುಡ್ಡ್‌ನ ಪುನಃ ಸಿಂಗಲ್ ನಂಬರ್‌ಗೆ ದುಡ್ಡ್ ಕಟ್ಟಿದೆ. ಇದ್ದ ದುಡ್ಡ್ ಮತ್ತೆ ಎಲ್ಲಾ ಖಾಲಿಯಾದೆ. ಇದರ್‌ಂದಾಗಿ ಸೀನನ ಕುಟುಂಬಕ್ಕೆ ಬದುಕಿಕೇ ಕಷ್ಟಾದೆ.

ಅತಿ ಆಸೆ ಗತಿ ಕೆಡ್ಸಿದೆ ಅಂತೇಳುವ ಮಾತ್‌ನ ತುಂಬಾ ಎಚ್ಚರಂದ ಪಾಲಿಸಿ ಕಂಡ್ ಬರಕು. ಇಲ್ಲದಿದ್ದರೆ ಇದೇ ಸ್ಥಿತಿ ನಾವ್ಗೂ ಆದೆ.

○ ಹುಲಿಮನೆ ಯಾದವ ಕೇಶವಯ್ಯ
ಮದೆನಾಡು

---

## ಸೋಬಾನೆ [ನಗೆಹನಿ]

ಸೋಭಾನೆ ಸೊಳ್ಳೊಟ್ಟೆ
ನಿನ್ನ ಗಂಡನ ಹೊಟ್ಟೆ ಡೊಳ್ಳೊಟ್ಟೆ
ಅಂವ ಕಟ್ಟಿದ ತಾಳಿ ಪುಸ್ಸಟ್ಟೆ ॥

ಸೋಬಾನೆ ಸೊಳ್ಳೊಟ್ಟೆ
ನಿನ್ನ ಮಗಳ ಹೊಟ್ಟೆ ದೊಳ್ಳೊಟ್ಟೆ
ಅವಳು ಧರಿಸಿದ ಬಟ್ಟೆ ಪುಸ್ಸಟೆ ॥

ಸೋಭಾನೆ ಸೊಳ್ಳೊಟ್ಟೆ
ನಿನ್ನ ಮಗಳು ಬರೀ ಲೊಟ್ಟೆ
ನಿನ್ನ ಮಾತ್ ಕೇಳಿ ನಾ ಕೆಟ್ಟೆ ॥

ಸೋಬಾನೆ ಸೊಳ್ಳೊಟ್ಟೆ
ನೀನ್ ನಂಗೆ ಮಾತ್ ಕೊಟ್ಟೆ
ನಿನ್ನ ಮಾತ್ ಕಟ್ಟೆಕಂಡ್
ನಾ ಊರ್ ಬುಟ್ಟೆ ॥

ಕೊಳಂಬೆ ವಿಸು ಬೆಳ್ಯಪ್ಪ
ಬೊಳ್ಳುರು ಜೆ.ಪಿ. ರಾಘವಯ್ಯ
ಬೆಂಗಳೂರು

## ನಮ್ಮೂರು ಸೋಂಪಜ್ಜ

ನಮ್ಮೂರು ಸೋಂಪಜ್ಜ ಊರವ್ಕೇ ಪೊರ್ಲು
ಅವನ ಕತೆ ಮಾತ್ರ ಕೇಳ್ವ್ಬವು ಮೊರ್ಲ್ಲ ।
        ಕೈ ಕಾಲೆಲ್ಲ ತುಂಬಾ ಸಣ್ಣ ಸಣ್ಣ
        ಹೊಟ್ಟೆ ಮಾತ್ರ ದೊಡ್ಡ ಒಂದ್ ಗುಡಾಣ ।
ಹಬ್ಬದ ದಿನ ಊರೆಲ್ಲಾ ತಿರುಗಾಡಿಕೆ ಹೋದು
ಕಡಂಬಿಟ್ಟ್ಯಾದ್ರೇ ಇಪ್ಪತ್ತೇ ಹೊಡೆದು ।
        ರೊಟ್ಟಿ ಮಾತ್ರ ಹತ್ತೇ ಸಾಕ್
        ಕಾಫಿ ಮಾತ್ರ ನಾಲ್ಕ್ ಗ್ಲಾಸ್ ಬೇಕ್ ।
ಸೋಂಪಜ್ಜ ಏಳಿಕೆ ತುಂಬಾ ಕಷ್ಟ ಪಡ್ದು
ಹಾಳಾದ ಉಸ್‌ರ್ ಎದೆ ಒಳಗೇ ಕಟ್ಟಿ ಬಾದು ।
        ಗೊರ್ಕೆ ಹೊಡೆಯಕಾಕನ ನಾವೆಲ್ಲ ನೋಡೊಕು
        ಅವನ ಬಾಯಿ ಮೂಗ್ ಅರುಳುದು ಕಾಣೊಕು ।
ಇದ್ರ ನೋಡ್ರೆ ನಮಿಗೆ ಹೆದ್ರಿಕೆ ಆದು
ಸಣ್ಣ ಮಕ್ಳಾದ್ರೆ ಹೆದ್ರಿಕಂಡ್ ಓಡೇ ಹೋದು ।
        ಈಜಿಕೆ ಹೋದು ಅಜ್ಜ ಮಕ್ಕಳೊಟ್ಟಿಗೆ ಹೊಳೆಗೆ
        ನೀರ್ ಕುಡ್ದ್ ಮುಳ್ಗುದು ಮ್ಯಾಲೇ ಕೆಳ್ಗೆ ।
ನೋಡಿಕೆ ಸೋಂಪಜ್ಜ ಒಂದ್ ತರದ ಕೋಣ
ತಬಲ ಬಡಿಯಕೆ ಅಂವ ತುಂಬಾ ಜಾಣ ।
        ಹೊಟ್ಟಿಲೇ ಅಜ್ಜ ತಬಲ ಬಡಿಯೊದು
        ಮಲಿಯನ ಚಂಡೆಗಿಂತ ಜೋರಾಗಿ ಕೇಳ್ದು ।
ಸೋಂಪಜ್ಜ ಬುಡ್ದು ಆಗಾಗ ಹೂಂಸ್
ಎಮ್ಮೆಕರ್ ಮರ್ಬಂಗೆ ಕೇಳ್ದು ಅವರೆ ವಾಯ್ಸ್ ।
        ದೊಂಡೆಲೇ ನಾದ, ನಾಲಿಗೆಲೇ ವಾಲಗ
        ಅಜ್ಜ ಬಡಿಯೊದು ಹೊಟ್ಟೆಲೇ ಡಮರುಗ ।
ನಮ್ಮೂರ್ ಕೇರಿಲಿ ಆಟ ನಾಟಕಲಿ
ಅಜ್ಜನ ಮ್ಯಾಜಿಕ್ ಬೇಕೇ ಬೇಕ್ ಅಲ್ಲಿ ।
        ಊರೊವು ಕೊಟ್ಟ್ಯೊಳೊ ಅಜ್ಜಂಗೆ ಬಿರ್ದು
        ತಬಲರಾಜ್ ನಮ್ಮ ಸೋಂಪಜ್ಜನೆಂಬ ಹಿರಿದು ।
ಬೈನೆ ಕಳ್ಳ್ ಅಜ್ಜಂಗೆ ಬಹಳ ಇಷ್ಟ
ಅದಿಕ್ಕಾಗಿ ಅಜ್ಜ ಪಡ್ದು ಬಹಳ ಕಷ್ಟ ।
        ಕಾಯ್ಗಿ ಕಲ್ಲ್ ಹೊಡಿಯೋ ಹುಚ್ಚು ಅಜ್ಜಂಗೆ
        ಗುರಿ ಮಡ್ಗಿ ಹೊಡ್ದರೆ ನಿಂತವರ ಮೈಗೆ ।
ಹೇಳಿಕೆ ಹೋದ್ರೆ ಇನ್ನೂ ಉಟ್ಟು ಅಜ್ಜನ ಗಂಟ್
ಆದ್ರೆ ಈ ಅಜ್ಜಂಗೂ ನಂಗೂ ಅದೇನೋ ನಂಟ್

**ಶಂಕರನ ಬಸಪ್ಪ,** ಕುಂಬಾರಕೊಪ್ಪಲ್, ಮೈಸೂರು,

## ಮಾದರಿ ಮಾಸ್ಟ್ರ

ಸ್ವಾಂಪ ಮಾಸ್ಟ್ರ ಹಳ್ಳಿ ಸ್ಕೂಲ್‌ಲಿ ಕೆಲ್ಸ ಮಾಡಿಕಂಡ್ ಇದ್ದೊ. ಸ್ಕೂಲ್ ಶುರು ಆಗಿ ಸ್ವಲ್ಪ ದಿನಲಿ ಮಳೆಗಾಲ ಹಿಡ್ದದೆ. ಹಳ್ಳಿಲಿ ಮಳೆಗಾಲಲಿ ಹಲಸ್‌ನ ಬೀಜ ಹೊರ್ದ್ ತಿಂಬೊದು ಒಂದು ಸಾಮಾನ್ಯ ವಿಷಯ. ಸ್ವಾಂಪ ಮಾಸ್ಟ್ರಗೆ ಹಲಿಸಿನ ಬೀಜತೇಳ್ರೆ ತುಂಬಾ ಖುಷಿ. ಇವು ದಿನೋಳು ಸ್ಕೂಲಿಗೆ ಹೋಕಾಕನ ಸೊಲ್ಪ ಹೊರ್ದ್ ತಕಂಡೋಗಿ ಆರಾಮ್ ಇರ್ಕನ ತಿಂಬೊತಿದ್ದೊ. ಒಂದು ದಿನ ಬಾರೀ ಜೋರು ಮಳೆ. ಅಂದ್ ಕ್ಲಾಸಿಗೆ ಮಕ್ಕ ಕಮ್ಮಿ ಬಂದಿದ್ದೊ. ಈ ಮಳೆಲಿ ಪಾಠ ಮಾಡ್ರೆ ಮಕ್ಕಳಿಗೆ ಕೇಳಿಕಿಲೆ, ಮತ್ತೆ ಮಕ್ಕ ಕಮ್ಮಿಂತೇಳಿ ಮಕ್ಕಳೇ, ಗಲಾಟೆ ಮಾಡದೆ ಓದಿಕಂಡ್ ಕುದ್ದ್‌ಕಣಿಂತೇಳಿ ಮೆಲ್ಲೆ ಹಲಸಿನ ಬೀಜ ತೆಗ್ದೊ. ಮೇಜದ ಮ್ಯಾಲೆ ಹಾಕೊಳಷ್ಟೆ. ಅಷ್ಟೊತ್ತಿಗೆ ಒಂದು ಜೀಪ್ ಬಂತ್ ನಿತ್ತತ್. ಜೀಪ್‌ಂದ ಇಳ್ದ ಇನ್‌ಸ್ಪೆಕ್ಟರ್ ಸೀದಾ ಕ್ಲಾಸಿಗೆ ಬಾತ್. ಓ, ಕೆಲ್ಸ ಕೆಟ್ಟತ್ ತೇಳಿ ಮಾಸ್ಟ್ರ ಕುದ್ದಲ್ಲಿಂದ ಎದ್ದ್ ಜೋರಾಗಿ "ಮಕ್ಕಳೇ, ಸುಟ್ಟ ಹಲಸಿನ ಬೀಜ ಹುಟ್ಟುವುದಿಲ್ಲ" ತೇಳಿ ಹೇಳ್ತ್. ಅಷ್ಟೊತ್ತಿಗೆ ಇನ್‌ಸ್ಪೆಕ್ಟರ್ ಬಂದ್ ಇದ್ ಎಂತದ್ ಮಾಸ್ಟ್ರೇ ತ ಕೇಳ್ತ್. ಆಗ ಮಾಸ್ಟ್ರ ಹೇಳ್ದೊ, ಇದು ಮಕ್ಕಳಿಗೆ ಉದಾಹರಣೆ ಕೊಡುವುದಕ್ಕೆ ತಂದಿರುವುದು ಸಾರ್ ತ. ಇನ್‌ಸ್ಪೆಕ್ಟ್ರಗೆ ಅಶ್ಚರ್ಯ ಆಗಿ ಬೇಷ್, ಪರ್ವಾಗಿಲ್ಲೆ ಈ ಮಾಸ್ಟ್ರ ಬಾಳ ಲಾಯ್ಕ ಉದಾಹರಣೆ ಕೊಟ್ಟ್ ಪಾಠ ಮಾಡ್ತಾ ಉಟ್ಟು. ಇವಂಗೆ ಒಂದ್ ಪ್ರಶಸ್ತಿ ಕೊಡಿಕೆ ಶಿಫಾರಸ್ಸು ಮಾಡಕುತ ಗ್ಯಾನ ಮಾಡ್ತ್. (ಸ್ವಾಂಪ ಹೆಸರ್ ಕಾಲ್ಪನಿಕ)

● **ಎಳ್ಳೀಕಾಲು ಕೆ. ರಮೇಶ,** ಭಾಗಮಂಡಲ.

## ಅಜ್ಜಿ ಮದ್ದ್

1. ನೇರಳೆ ಹಣ್ಣ್‌ನ ಜೂಸ್ ಮಾಡಿ ಕುಡ್ದರೆ ಭೇದಿ ನಿತ್ತದೆ.
2. ಕಿತ್ತಳೆ ಹಣ್ಣ್ ರಸಕ್ಕೆ ಜೇನ್‌ತುಪ್ಪ ಮತ್ತೆ ಸ್ವಲ್ಪ ಉಪ್ಪು ಸೇರ್ಸಿ ಕುಡ್ದರೆ ನೆಗ್‌ಡಿ, ಕೆಮ್ಮು ನಿತ್ತದೆ.
3. ಕರಿಬೇವಿನ ಸೊಪ್ಪುನ ಪೊಜ್ಜಿ ಮಾಡಿ ತಿಂದರೆ ಶರೀರದ ಭಾರ ಕಮ್ಮಿ ಆದೆ.
4. ಪುದಿನ ಸೊಪ್ಪುನ ಪೊಜ್ಜಿಮಾಡಿ ಊಟ ಮಾಡ್ರೆ ಲಾಯ್ಕ ಜೀಣ ಆದೆ.
5. ಸಾಸ್‌ವೆನ ಬಾಯಿಲ್ಲಿ ಇಟ್‌ಕಂಡ್ ಅಗ್ದರೆ ಹಲ್ಲ್‌ಬೇನೆ ವಾಸಿಯಾದೆ.

● **ಅಚ್ಚಲ್ಪಾಡಿ ಬೀನಾ,** ಗದ್ದಿಗೆ.

## ಪ್ರಿಯ ಓದುಗರ ಗಮನಕ್ಕೆ

'ಕೊಡಗು ಸಂಗಾತಿ' ಪಾಕ್ಷಿಕ ಪತ್ರಿಕೆಯು ಗೌಡ ಜನಾಂಗದ ಏಳಿಗೆ ಐಕ್ಯತೆಯನ್ನು ಬಯಸಿ ಹೊರಹೊಮ್ಮಿ ಇದೀಗ ವರ್ಷ ತುಂಬಲಿದೆ. ನೀವುಗಳು ಕೋರದಿದ್ದರೂ ಸಹ ನಿಮ್ಮ ಆಪ್ತರು ಕೊಟ್ಟ ವಿಳಾಸದ ಮೇರೆ ನಾವುಗಳು ದಿನಾಂಕ 1-4-97ರಿಂದಲೂ ಮತ್ತು ಇತ್ತೀಚೆಗೂ ಸಹ ಪತ್ರಿಕೆಯನ್ನು ಕಳಿಸಿದ್ದೇವೆ. ಆದರೆ ಹಲವು ನಮ್ಮ ಪ್ರಿಯ ಓದುಗರಿಂದ ಈ ತನಕ ಯಾವುದೇ ರೀತಿಯ ಸ್ಪಂದನವಿರುವುದಿಲ್ಲ ಇದರಲ್ಲಿ ಕೆಲವರು ತ್ರೈಮಾಸಿಕ, ಇನ್ನು ಕೆಲವರು ಅರೆವಾರ್ಷಿಕ ಚಂದಾಹಣವನ್ನು ಕೊಟ್ಟಿರುತ್ತಾರೆ. ಇವರಲ್ಲಿ ಕೆಲವರದು ವಾಯಿದೆ ಮುಗಿದಿರುತ್ತದೆ. ಅಂತವರು ಪುನಃ ಚಂದಾ ಹಣವನ್ನು ಪಾವತಿಸಿ ನಿಮ್ಮ ಸದಸ್ಯತ್ವವನ್ನು ನವೀಕರಿಸಿಕೊಳ್ಳಬೇಕಾಗಿ ವಿನಂತಿ. ಇನ್ನು ಮುಂದಕ್ಕೆ ಸದಸ್ಯರಿಗೆ ಮಾತ್ರ ಪತ್ರಿಕೆಯನ್ನು ಕಳುಹಿಸಲಾಗುವುದು.

**ಸಂಗಾತಿ ಬಳಗ**

---

## ಕೊಡಗು ಸಂಗಾತಿಗೆ ಜೀವಾವಧಿ ಸದಸ್ಯತನ ಕೊಟ್ಟೋಲೊ

ಶ್ರೀ ಹುದೇರಿ ಉತ್ತಪ್ಪ ನಾಗೇಶ್, ವಕೀಲರು, ಮಡಿಕೇರಿ, ಇವರು ರೂ. 1000/- ಜೀವಾವಧಿ ಸದಸ್ಯತ್ವವ ಕೊಟ್ಟ್ ಪತ್ರಿಕೆ ಬೆಳೆಯಲು ಸಹಕರಿಸಿದ್ದಾರೆ. ಇವರಿಗೆ ಸಂಗಾತಿ ಬಳಗದ ವಂದನೆಗಳು.

–ಸಂ.

---

## ವ್ಯಕ್ತಿ ವಿಚಾರ ದಾರೆ – ನಿಡ್ಯಮಲೆ ಮುದ್ದಪ್ಪ

ದಿ|| ನಿಡ್ಯಮಲೆ ಮುದ್ದಪ್ಪ, ನಿವೃತ ನ್ಯಾಯದೀಶ ಇವರ ಜೀವನ ಚರಿತ್ರೆಯನ್ನು ನಮ್ಮ "ಸಂಗಾತಿ" ನಿಮ್ಮ ಮುಂದಿಡಲು ಬಯಸಿದೆ. ಮುಂದಿನ ಸಂಚಿಕೆಯಿಂದ ಕೆಲವು ಭಾಗಗಳಾಗಿ ನಿಮ್ಮನ್ನು ಸೇರಲಿದೆ.

–ಸಂ

---

## ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿ.

ದಿನಾಂಕ 4-1-1998ನೇ ಭಾನುವಾರ ಬೆಳಿಗ್ಗೆಯಿಂದ ನಿರೀಕ್ಷಿಸಿದಂತೆ ಕಾರ್ಯಕ್ರಮಗಳು ನಡೆಯಲಿವೆ. ಸರ್ವರಿಗೂ ಸುಸ್ವಾಗತ.

ತುಂತಜ್ಜಿರ ವೆಂಕಟೇಶ್
ಅಧ್ಯಕ್ಷರು

K·R.N.N. 240

ಜನಶಕ್ತಿಯನ್ನು ಸಂಘಟಿಸುವ ನಿಟ್ಟಿನಲ್ಲಿ ತಂದಿರುವ ನಿಮ್ಮ ಈ ಪ್ರಯತ್ನಕ್ಕೆ ನಮ್ಮ ಸಹಕಾರವಿರುವುದಲ್ಲದೆ, ನಮ್ಮ ಜನಾಂಗದ ಏಕೈಕ ಪಾಕ್ಷಿಕ ಪತ್ರಿಕೆಯಾದ ಕೊಡಗು ಸಂಗಾತಿಗೆ ನಮ್ಮೆಲ್ಲರ ಹೃತ್ಪೂರ್ವಕ ಶುಭಾಶಯಗಳು....



ಕರೆಮನೆ ಜಯಕುಮಾರ್ s/o ಅಪ್ಪಚ್ಚು

ಮತ್ತು

ಕರೆಮನೆ ರಾಧಿಕ ಜಯಕುಮಾರ್

ಮಕ್ಕಳಾದ

ಕರೆಮನೆ ಅನುಷ ಜಯಕುಮಾರ್

ಕರೆಮನೆ ಮೋನಿಷ ಜಯಕುಮಾರ್

ವಿಳಾಸ : ನಂ. 538, 15ನೇ ಮುಖ್ಯರಸ್ತೆ
6ನೇ ಅಡ್ಡರಸ್ತೆ, ಸರಸ್ವತಿಪುರಂ
ಮೈಸೂರು-570 009
ದೂರವಾಣಿ : 545052

ಕಛೇರಿ ವಿಳಾಸ :

ಜಯಕುಮಾರ್ ಅಂಡ್ ಕಂ.
[ಆಡಿಟರ್ಸ್ ಮತ್ತು ಟ್ಯಾಕ್ಸ್ ಕನ್ಸಲ್ಟೆನ್ಸಿ]
162, ರಮಾವಿಲಾಸ ರಸ್ತೆ,
ಮೈಸೂರು-24
ದೂರವಾಣಿ : 36862

Printe by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-12 Published at Mysore, Editor PATTADA P. SHEELAMANI, 35, 1st Main, 1st Cross, 4th Block, (Near Dvisional Telephone Office) Jayalakshmipuram, Mysore-570 012 Phone : 516771